


ಕನ್ನಡ ವಿಶ್ವವಿದ್ಯಾಲಯ

ಹಂಪಿ


೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಹೇಮಗಿರಿ - ಒಂದು ಸಾಂಸ್ಕೃತಿಕ ಅಧ್ಯಯನ


ನಿಬಂಧಕಾರರು

ಅಫ್ಸರ್ ಪಾಷ

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಎಚ್.ಎನ್. ಮಂಜುರಾಜ್

ಸಹಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ, ಮೈಸೂರುಜಿಲ್ಲೆ





ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧



ಕನ್ನಡ ವಿಶ್ವವಿದ್ಯಾಲಯ
ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಹೇಮಗಿರಿ - ಒಂದು ಸಾಂಸ್ಕೃತಿಕ ಅಧ್ಯಯನ

ನಿಬಂಧಕಾರರು

**ಅಫ್ಸರ್ ಪಾಷ**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ. ಹಂಪಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಎಸ್.ಮಂಜುರಾಜ್**

ಕನ್ನಡ ಸಹಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

# ಅಭ್ಯರ್ಥಿಯ ಘೋಷಣಾ ಪತ್ರ

**"ಹೇಮಗಿರಿ - ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ **KVTMKS/00482**ರ ವಿದ್ಯಾರ್ಥಿ ಆದ ನಾನು ೨೦೧೦-೧೧ನೇ ಸಾಲಿನ ಪರೀಕ್ಷೆಗಾಗಿ ಡಾ. ಎಚ್.ಎನ್.ಮಂಜುರಾಜ್, ಸಹಪ್ರಾಧ್ಯಾಪಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಕೃಷ್ಣರಾಜನಗರ ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೧೩-೦೬-೨೦೧೧

Afsarpasha
(ಅಫ್ಸರ್ ಪಾಷ)
೨೦೧೦-೧೧ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00482**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಅಫ್ಸರ್‌ಪಾಷ ಅವರು ನನ್ನ ಮಾರ್ಗದರ್ಶನದಲ್ಲಿ **"ಹೇಮಗಿರಿ – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೧೩-೦೬-೨೦೧೧

(ಡಾ. ಎಚ್.ಎಸ್. ಮಂಜುರಾಜ್)
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ

# ಹೇಮಗಿರಿ – ಒಂದು ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ



*****

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಸೂರ್ಯ ಕೇಂದ್ರ ವ್ಯವಸ್ಥೆಯ ವಿಶ್ವದಲ್ಲಿ ಜೀವಿಗಳು ವಾಸವಾಗಿರುವ ಏಕೈಕ ಗ್ರಹವೇ ಭೂಮಿಯಾಗಿದೆ. ಈ ಭೂಮಿಯಲ್ಲಿನ ಶೇಕಡ ೨೯ ಭಾಗ ಮಾತ್ರವಿರುವ ನೆಲದಲ್ಲಿ ಮಾನವನು ಅನಾದಿಕಾಲದಿಂದಲೂ ತನ್ನ ಸಂಸ್ಕೃತಿಯ ಬೀಜವನ್ನು ಬಿತ್ತುತ್ತಾ ನಾಗರಿಕತೆಯೆಂಬುದನ್ನು ಐತಿಹಾಸಿಕ ಆಧಾರಿತ ಕೊಡುಗೆಯನ್ನಾಗಿ ನೀಡುತ್ತಾ ಬಂದಿರುವನು. ಮಾನವನ ಉಗಮ ಭೂಮಿಯ ಯಾವ ಭಾಗದಲ್ಲಿ ಮೊದಲಾಯ್ತು ಎಂಬ ಸೃಷ್ಟಿಯ ವೈಚಿತ್ರ್ಯವನ್ನು ಕಂಡು ಹಿಡಿಯುವ ಪ್ರಯತ್ನವೂ ಸಾಗುತ್ತಲೇ ಬಂದಿದೆ. ಹೀಗಿರುವಾಗ ಭರತನ ನಾಡಾದ ಈ ಭಾರತವು ಸುಮಾರು ಸಾವಿರಾರು ವರ್ಷಗಳ ಸಂಸ್ಕೃತಿಯನ್ನು ಬಿತ್ತಾರ ಮಾಡುತ್ತಿದ್ದು, ಪ್ರಪಂಚದ ಇತರ ದೇಶಗಳ ಸಂಸ್ಕೃತಿಗೆ ಅದು ತನ್ನದೇ ಆದ ನೆಲೆಯನ್ನು ನೀಡುತ್ತಿರುವುದು ತನ್ನ ಹೃದಯದ ಶ್ರೀಮಂತಿಕೆ ಎಂದೇ ಹೇಳಬಹುದಾಗಿದೆ. ಭಾರತದ ಸಾಂಸ್ಕೃತಿಕ ಕೊಡುಗೆಗಳಲ್ಲಿ ಕರ್ನಾಟಕ ಪ್ರಾಂತ್ಯವೂ ಸಹ ತನ್ನದೇಯಾದಂತಹ ಅಮೂಲ್ಯವಾದಂತಹ ಕೊಡುಗೆಯನ್ನು, ಭಾವೈಕ್ಯತೆಯನ್ನು ನೀಡುತ್ತಾ ಬಂದಿರುವುದು, ವಿಪುಲವಾದ ಭೌಗೋಳಿಕ ಸಂಪತ್ತನ್ನೂ, ಐತಿಹಾಸಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕ ಭಾರತದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

ಭಾರತದ ಅವಿಭಾಜ್ಯ ಅಂಗವಾಗಿರುವ ಕರ್ನಾಟಕವು ಕಲೆ, ಸಾಹಿತ್ಯ, ಲಲಿತ ಕಲೆಗಳಲ್ಲಿ ತನ್ನದೇಯಾದ ವಿಶಿಷ್ಟತೆಯನ್ನು ಬೆಳೆಸಿಕೊಂಡು ಪ್ರಾಚೀನ ಕಾಲದಿಂದಲೂ ಕಾಲಗತಿಯಲ್ಲಿ ಒದಗಿಬರುತ್ತಿರುವ ಏಳು-ಬೀಳುಗಳನ್ನು ಲೆಕ್ಕಿಸದೆ ಸ್ವಂತಿಕೆಯನ್ನು ಬೆಳೆಸಿಕೊಂಡು ತನ್ನದೇಯಾದಂತಹ ಸಂಪ್ರದಾಯಗಳನ್ನು ಪರಂಪರೆಯನ್ನು ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ಮೈಗೂಡಿಸಿಕೊಂಡು ಸಾಗುತ್ತಾ ಬರುತ್ತಿದೆ. ಒಂದು ಪ್ರಾಂತ್ಯದ ನೈಜವಾದ ಚರಿತ್ರೆಯೆಂದರೆ ಆ ಪ್ರದೇಶದಲ್ಲಿ ಜನರು ಅನುಸರಿಸಿದ ಧರ್ಮ, ರೀತಿ-ನೀತಿಗಳು, ಜೀವನಶೈಲಿ, ಕಟ್ಟಿದ ಕಲೆ, ಬೆಳೆಸಿದ ಸಾಹಿತ್ಯ, ರೂಢಿಸಿದ ಆಚಾರ-ವಿಚಾರಗಳು, ಇವೇ ಮೊದಲಾದವುಗಳನ್ನು ಸಾಂಸ್ಕೃತಿಕ ಅಧ್ಯಯನವೆಂದೇ ಕರೆಯ-

ಬಹುದು. ಈ ರೀತಿಯ ಸಾಂಸ್ಕೃತಿಕ ಅಧ್ಯಯನದಲ್ಲಿ 'ಹೇಮಗಿರಿ ಒಂದು ಸಾಂಸ್ಕೃತಿಕ ಅಧ್ಯಯನ' ಈ ಸಂಪ್ರಬಂಧದ ಸದುದ್ದೇಶವಾಗಿದೆ.

ಕರ್ನಾಟಕ ಸಂಸ್ಕೃತಿಯ ಪರಂಪರೆಯು ವೈಭವೋಪೇತವಾದುದು. ಇಲ್ಲಿನ ವೈವಿಧ್ಯತೆಯಲ್ಲೂ ಏಕತೆಯೆಂಬ ಕೂಗು ಸದಾ ಕೆರಳಿ ಹೂವಿನಂತೆ ಅರಳಿ ಪರಿಮಳವನ್ನು ಹರಡುತ್ತಿರುತ್ತದೆ. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮೈಸೂರು ಸಂಸ್ಥಾನ ಮೊದಲಾದ ಸಾಮ್ರಾಜ್ಯಗಳ ತವರು ಮನೆಯಾಗಿದ್ದು, ಅನೇಕ ಮನೆತನಗಳ ಗಣಿಯಾಗಿದ್ದು, ಶಿಲ್ಪಕಲೆಯ ತವರೂರು ಆಗಿದ್ದು, ಹಲವಾರು ಪ್ರವಾಸಿಗಳಿಗೆ ತಾಣವೂ ಆಗಿರುವ ಕರ್ನಾಟಕ ಕವಿಗಳಿಗೆ, ಸಂಸೋಧಕರಿಗೆ ಅಧ್ಯಯನಗಾರರಿಗೆ ಹಾಗೂ ಬರಹಗಾರರಿಗೆ ತವರುಮನೆಯಂತಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಕರ್ನಾಟಕವು ನದಿಗಳ ಪಾತ್ರದಲ್ಲೂ ವಿಭಿನ್ನವಾದಂತಹ ಸ್ಥಾನವನ್ನು ಗಳಿಸಿದೆ. ಕಾವೇರಿಯು ಜೀವಾಳವಾಗಿದ್ದರೆ ಕೃಷ್ಣ, ತುಂಗಭದ್ರಾ, ಗೋದಾವರಿ ಮೊದಲಾದವು ನಾಗರಿಕತೆಗಳು ಬೆಳವಣಿಗೆಯಾಗಲು ಸಹಕಾರಿಯಾಗಿವೆ. ಇಂತಹ ನಾಡಿನಲ್ಲಿ ಋಷಿಮುನಿಗಳು ನೆಲೆಸಿದ್ದು ಪುರಾಣಗಳ ಕಾಲದಿಂದಲೂಈ ಪ್ರಾಂತ್ಯವೂ ತನ್ನದೇ ಯಾದಂತಹ ಪಾವಿತ್ರ್ಯತೆ ಗಳಿಸಿರುವುದರಲ್ಲಿ ಎರಡು ಮಾತಿಲ್ಲ. ಚಾಮುಂಡೇಶ್ವರಿಯೆ ನೆಲೆಯಾದ ಮಹಿಷಾಮಂಡಲ ಪ್ರಾಂತ್ಯ. ಪರಶುರಾಮ; ರಾವಣರು ನೆಲೆದಾಡಿದ ಗೋಕರ್ಣ, ಮುರುಡೇಶ್ವರ ಸ್ಥಳಗಳು, ರಾಮ-ಹನುಮಂತ, ವಾನರರು ಸುಳಿದಾಡಿದ ಕಿಷ್ಕಿಂದೆ, ಪಾಂಡವರು ತಂಗಿದ್ದ ಕುಂತಿಬೆಟ್ಟ, ಮಾಂಡವ್ಯ ಋಷಿಗಳು ತಪಸ್ಸು ಮಾಡಿದ್ದ ಮಂಡ್ಯ ಹಾಗೆಯೇ ಭೃಗುಮುನಿ ಮಹರ್ಷಿಗಳು ತಪಸ್ಸಿಗೆ ಆಯ್ಕೆ ಮಾಡಿಕೊಂಡ 'ಹೇಮಗಿರಿ ಕ್ಷೇತ್ರ(ಭೃಗುಕ್ಷೇತ್ರ)' ಇವುಗಳೆಲ್ಲ ಕರ್ನಾಟಕ ಪ್ರಾಂತ್ಯದಲ್ಲೇ ಇದ್ದು ಸಂಶೋಧಕರಿಗೆ ಕೈಗನ್ನಡಿಯಾಗಿದೆ.

ಪ್ರಸ್ತುತ ೨೦೧೦-೧೧ನೇ ಸಾಲಿನಲ್ಲಿ ನಾನು ಕನ್ನಡ ಎಂ.ಫಿಲ್ ಪದವಿಗೆ ಸಂಪ್ರಬಂಧ ರಚನೆಯಲ್ಲಿ ತೊಡಗಿದಾಗ ನನಗೆ ವಿಷಯದ ಆಯ್ಕೆಯಲ್ಲಿ ಸಾಕಷ್ಟು ಗೊಂದಲಗಳುಂಟಾದವು. ಮೊದಲು ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿ ದಂತೆಯೂ, ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಮುದಾಯ ಕರ್ನಾಟಕದಲ್ಲಿ ಹಿಂದೂ-ಮುಸ್ಲಿಂ ಸಂಸ್ಕೃತಿಯ ಸಮ್ಮಿಲನ, ಕರ್ನಾಟಕದ ಸೂಫಿಪಂಥ, ಮೈಸೂರು ಜಿಲ್ಲೆಯಲ್ಲಿನ

ಉರುಸುಗಳು, ಪಿರಿಯಾಪಟ್ಟಣ ತಾಲ್ಲೂಕಿನ ಜನಪದದೇವತೆಗಳು ಹೀಗೆ ಹಲವಾರು ವಿಷಯಗಳು ಸುಳಿದಾಡುತ್ತಿರಲು ಸೂಕ್ತವಾದ ವಿಷಯದ ಆಯ್ಕೆಯಲ್ಲಿರುವಾಗ ನನಗೆ ಆಕಸ್ಮಿಕವಾಗಿ ನಾನು ಈ ಹಿಂದೆ ವಿದ್ಯಾಭ್ಯಾಸ ಮಾಡುತ್ತಿದ್ದ ಸ್ಥಳವಾದ ಹೇಮಗಿರಿಯ ನೆನಪಾಗಿ ನನ್ನನ್ನು ಸುಸಂಸ್ಕೃತ ಪ್ರಜೆಯಾಗಿ ರೂಪಿಸಿ ನನ್ನಲ್ಲಿ ವಿದ್ಯಾರ್ಜನೆಯನ್ನು ಇಮ್ಮಡಿಗೊಳಿಸಲು ಕಾರಣವಾದ ವಿದ್ಯಾಕ್ಷೇತ್ರವಾದ ಹೇಮಗಿರಿ ಸುಕ್ಷೇತ್ರವೇ ನನ್ನ ಸಂಶೋಧನಾ ಕಾರ್ಯಕ್ಕೆ ಸೂಕ್ತವಾದದ್ದು ಹಾಗೂ ನನಗೆ ಉತ್ತಮ ಬದುಕನ್ನು ರೂಪಿಸಲು ಕಾರಣೀಭೂತವಾದಂತಹ ಈ ಸ್ಥಳದ ಮಹತ್ವವನ್ನು ಲೋಕಾರ್ಪಣೆ ಮಾಡಲು ನನಗೆ ದೊರೆತ ಸದಾವಕಾಶವೆಂದು ಅರಿತುಕೊಂಡು ಈ ಸಂಪ್ರಬಂಧವನ್ನು ರಚಿಸಲು ಮುಂದಾದೆನು.

ನಾನು ಮಾಧ್ಯಮಿಕ ಶಿಕ್ಷಣವನ್ನು ಪೂರೈಸಿದ ಬಳಿಕ ಪ್ರೌಢಶಿಕ್ಷಣವನ್ನು ಪಡೆಯಲು ಈ ಸುಂದರವಾದ ತಾಣದಲ್ಲಿನ ಶ್ರೀ ಆದಿಚುಂಚನಗಿರಿ ಮಠದ ಶಾಖೆ-ಯಾದಂತಹ ಹೇಮಗಿರಿ ಶಾಖೆಯ ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ಪ್ರೌಢಶಾಲೆಗೆ ಬಂದೆನು. ಆಗ ನನ್ನ ಮನದಾಳದಲ್ಲಿ ಮೂಡಿದ ಮೊದಲ ಭಾವನೆಯೇ ಇಂತಹ ಸುಂದರ ರಮ್ಯಕ್ಷೇತ್ರದ ಹಿನ್ನೆಲೆಯನ್ನು ಅರಿಯಬೇಕು. ಹಾಗಾಗಿ ನಾನು ಪ್ರೌಢಶಿಕ್ಷಣದ ವಿದ್ಯಾರ್ಥಿಯಾಗಿದ್ದಾಗಲೇ ಈ ಸ್ಥಳದ ಬಗ್ಗೆ ಸಾಕಷ್ಟು ಕುತೂಹಲಕಾರಿ ಆದಂತಹ ವಿಷಯಗಳನ್ನು ಸಂಗ್ರಹಣೆ ಮಾಡತೊಡಗಿದೆನು. ಹೇಮಗಿರಿ ಎಂಬ ಸ್ಥಳನಾಮದ ವಿಶೇಷತೆ, ಮಹತ್ವ, ಅಲ್ಲಿನ ಬೆಟ್ಟ, ಗುಡ್ಡಗಳು, ಅಣೆಕಟ್ಟು, ಹೇಮಾವತಿ ನದಿಯು ಹರಿಯುವ ಪಾತ್ರ, ಬೆಳ್ಳಿಬೆಟ್ಟದ ವಿಶೇಷತೆ, ಬೆಟ್ಟದರಂಗನ ವೈಶಿಷ್ಟ್ಯತೆ, ಭೃಗುಮುನಿಗಳ ಗುಹೆ, ಕೋಡುಗಲ್ಲಿನ ದೃಶ್ಯ, ಸುರಂಗಮಾರ್ಗಗಳಿರುವ ಮಾಹಿತಿ, ಪ್ರಕೃತಿಯ ರಮ್ಯತಾಣದ ಗುಟ್ಟು, ಗಾಯಿತ್ರಿಶಿಲೆ, ಆಂಜನೇಯನ ದೇವಸ್ಥಾನ, ಅರಣ್ಯಸಂಪತ್ತು, ಬೇವಿನಮರಗಳು ಹಾಗೂ ಗಂಧದ ಮರಗಳು ಹೇರಳವಾಗಿರುವುದು, ದನಗಳ ಜಾತ್ರೆಯ ವೈಶಿಷ್ಟ್ಯ, ತೆಪ್ಪೋತ್ಸವದ ವೈಭವ ಇವುಗಳೆಲ್ಲ ನಾನು ವಿದ್ಯಾರ್ಥಿದೆಸೆಯಲ್ಲಿರು-ವಾಗಲೇ ಸಾಕಷ್ಟು ಪ್ರಭಾವವನ್ನು ಬೀರಿದ್ದವು. ಆಗಲೇ ನನಗೆ ಈ ಸ್ಥಳದ ಬಗ್ಗೆ ಪುಸ್ತಕವೊಂದು ರಚನೆಮಾಡುವ ಕುತೂಹಲವೂ ಮೂಡಿದ್ದು ಆ ಸೌಭಾಗ್ಯವು ನನಗೆ ಎಂ.ಫಿಲ್ ಪದವಿಯನ್ನು ಪಡೆಯುವಾಗ ಮೂಡಿಬಂದಿರುವುದು ತುಂಬಾ ಹರ್ಷವಾಗಿದೆ.

ಸಕ್ಕರೆ ನಾಡು, ಮಾಂಡವ್ಯ ಋಷಿಗಳ ತಪೋಬೀಡಾಗಿರುವ ಮಂಡ್ಯ ಜಿಲ್ಲೆಯು ಕರ್ನಾಟಕದ ದಕ್ಷಿಣಭಾಗದಲ್ಲಿನ ಪೂರ್ವಭಾಗದಲ್ಲಿದೆ. ಮಂಡ್ಯ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಕೃಷ್ಣರಾಜಪೇಟೆಯು ತನ್ನದೇಯಾದಂತಹ ವೈಶಿಷ್ಟ್ಯತೆಯನ್ನು ಪಡೆದು-ಕೊಂಡಿದೆ. ಈ ಹಿಂದೆ ಇದಕ್ಕೆ 'ಅತ್ತಿಗುಪ್ಪೆ' ಎಂದು ಹೆಸರಿದ್ದು ಮೈಸೂರು ಒಡೆಯರ ಆಳ್ವಿಕೆಯ ಕಾರಣಗಳಿಂದಾಗಿ ೨೦ನೇ ಶತಮಾನದಲ್ಲಿ ಕೃಷ್ಣರಾಜಪೇಟೆ ಎಂದೂ ನಾಮಾಂಕಿತಗೊಂಡಿತು. ಈ ಕೃಷ್ಣರಾಜಪೇಟೆಯನ್ನು ಸಂಕ್ಷಿಪ್ತಗೊಳಿಸಿ ಕೆ.ಆರ್.ಪೇಟೆ ಎಂತಲೂ ಕರೆಯಲಾಗುತ್ತಿದ್ದು ಈ ತಾಲ್ಲೂಕಿನಲ್ಲಿ ಹಲವಾರು ಚಾರಿತ್ರಿಕ ಹಾಗೂ ಪೌರಾಣಿಕ ಹಿನ್ನೆಲೆಯುಳ್ಳ ಸ್ಥಳಗಳಿದ್ದು, ಅವುಗಳಲ್ಲೊಂದಾದ 'ಹೇಮಗಿರಿ' ವಿಶಿಷ್ಟ-ವಾದಂತಹ ಸ್ಥಾನವನ್ನು ಪಡೆದುಕೊಂಡಿದೆ.

ಹೇಮಗಿರಿಯು ಶ್ರೀಕ್ಷೇತ್ರ, ತಪೋಕ್ಷೇತ್ರ, ದಿವ್ಯಕ್ಷೇತ್ರ, ಭೃಗುಕ್ಷೇತ್ರವೆಂದೆನಿಸಿಕೊಂಡು ಹೇಮಾದ್ರಿ, ಕನಕಗಿರಿ, ಸುವರ್ಣಗಿರಿ, ರತ್ನಗಿರಿ ಎಂಬ ವಿವಿಧ ನಾಮಗಳಿಂದ ಜನರ ಹೃದಯದಲ್ಲಿ ಬೇರೂರಿದೆ. ಅಂತೆಯೇ ಅಲ್ಲಿನ ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯು ಶ್ರೀರಂಗನಾಥನಾಗಿಯೂ ನೆಲೆಸಿದ್ದಾನೆ. ಇಂತಹ ಸ್ಥಳನಾಮಗಳನ್ನು ಬರವಣಿಗೆಯಲ್ಲಿ ತರಲು ಯತ್ನಿಸಿದ ನಾನೇ ಧನ್ಯನೆಂದು ಭಾವಿಸುತ್ತೇನೆ.

ಈ ಕೃತಿಯ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶವನ್ನು ಸವಿವರವಾಗಿ ತಿಳಿಸಲಾಗಿದೆ. ಅಲ್ಲದೆ ಈ ಕೃತಿಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಸಂಶೋಧನಾಯುಕ್ತವಾಗಿ ಸಾದರಪಡಿಸಲಾಗಿದೆ. ಮುಂದುವರಿದು ಹೇಮಗಿರಿ ಸ್ಥಳನಾಮದ ಅರ್ಥವನ್ನು ಹಾಗೂ ಸ್ಥಳದ ಮಹತ್ವ ಮತ್ತು ಮಹಿಮೆಯನ್ನು ತಿಳಿಸುವುದರ ಜೊತೆಗೆ ಊರಿನ ಸಮೀಕ್ಷೆಯನ್ನು ಸಹ ನಡೆಸಲಾಗಿದೆ.

ಹಾಗೆಯೇ ಹೇಮಗಿರಿಯ ಭೌಗೋಳಿಕ ಮಹತ್ವವಾದ ಬೆಟ್ಟ ಗುಡ್ಡಗಳ ಸಾಲುಗಳು, ಹೇಮಾವತಿ ನದಿಯ ಪಾತ್ರ, ಚಿನ್ನ, ಬೆಳ್ಳಿಯ ನಿಕ್ಷೇಪಗಳು, ಕಿರು ಅರಣ್ಯ ಪ್ರದೇಶಗಳು ಮೊದಲಾದ ಸುಂದರ ರಮ್ಯ ತಾಣಗಳ ಬಗ್ಗೆ ಹಾಗೂ ಚಾರಿತ್ರಿಕವಾಗಿ ಅದು ಪಡೆದುಕೊಂಡಿರುವ ಮಹತ್ವದ ಬಗ್ಗೆ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಹೇಮಗಿರಿಯು ಪೌರಾಣಿಕವಾಗಿ ಪಡೆದುಕೊಂಡಿರುವ ಮಹತ್ವವನ್ನು, ಭೃಗುಕ್ಷೇತ್ರದ ಮಹತ್ವವನ್ನು ಅದರ ಹಿನ್ನೆಲೆಯನ್ನು ತಿಳಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹೇಮಗಿರಿಯ ಸುತ್ತ ಮುತ್ತಲಿನ ಗ್ರಾಮಗಳಾದ ಬಂಡಿಹೊಳೆ, ನಾಟನಹಳ್ಳಿ, ಕುಪ್ಪಹಳ್ಳಿ, ಲಕ್ಷ್ಮೀಪುರ ಮೊದಲಾದ ಗ್ರಾಮಗಳ ಜನಸಮುದಾಯವನ್ನು ಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಗುರುತಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಹೇಮಗಿರಿಯ ಗುರುಕುಲ, ಶ್ರೀ ಕಲ್ಯಾಣವೆಂಕಟರಮಣ ಸ್ವಾಮಿ ಶಿಕ್ಷಣಸಂಸ್ಥೆ, ಭೃಗುಮುನಿ ಆಶ್ರಮ, ದೇವಸ್ಥಾನಗಳು, ಶಾಸನಗಳು, ಜಾತ್ರೆ, ತೆಪ್ಪೋತ್ಸವ, ಹಬ್ಬಗಳು, ಹಾಗೂ ಇಂದಿನ ಸ್ಥಿತಿಗತಿಗಳ ಬಗ್ಗೆ ತಿಳಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಹೇಮಗಿರಿ ಅಭಿವೃದ್ಧಿಯಲ್ಲಿ ಪಾಲ್ಗೊಂಡಂತಹ ಪ್ರಮುಖ ಮಹನೀಯರುಗಳು, ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ಗಳ ಬಗ್ಗೆ ಮಾಹಿತಿ ಗುರುತಿಸಿದೆ.

ಎಂಟನೇ ಅಧ್ಯಾಯದಲ್ಲಿ ಅಧ್ಯಯನದಿಂದ ಉಂಟಾದ ಫಲಿತಗಳನ್ನು ಹಾಗೂ ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳನ್ನು ಕ್ಷೇತ್ರಕಾರ್ಯದ ವಿವರವನ್ನು, ಛಾಯಾಚಿತ್ರ ಗಳನ್ನು ಹಾಗೂ ಭೃಗುಕ್ಷೇತ್ರ ಕುರಿತ ಗೀತೆ-ಹಾಡುಗಳನ್ನು ಸಂಗ್ರಹಿಸಿ ಮತ್ತು ರಚಿಸಿ ಕೃತಿಯಲ್ಲಿ ತರಲಾಗಿದೆ.

ಅಂತಿಮವಾಗಿ ನಕ್ಷೆಗಳನ್ನು ಸಂಗ್ರಹಿಸಿ ಮುದ್ರಿಸಲಾಗಿದೆ.

## ಅಧ್ಯಾಯ - ೨

# ಹೇಮಗಿರಿ ಸ್ಥಳಮಹತ್ವ, ಅರ್ಥ ಮತ್ತು ಊರಿನ ಸಮೀಕ್ಷೆ

**ಮಹತ್ವ:** ಹೇಮಗಿರಿ ಕ್ಷೇತ್ರವು ಪ್ರವಾಸಿಗರ ಕಣ್ಮನ ಸೂರೆಗೊಳ್ಳಬಲ್ಲ ಸ್ವರ್ಗ ಸೀಮೆಯಾಗಿದೆ. ಇಲ್ಲಿನ ಮನಮೋಹಕ ನದೀತೀರ, ದೇವಾಲಯಗಳನ್ನೊಳಗೊಂಡ ಸುಂದರ ತಾಣ, ಆಹ್ಲಾದಕರ ವಾತಾವರಣ, ಮರೆಯಲಾಗದಂತಹ ಆತಿಥ್ಯ ನೀಡುವ ಇಲ್ಲಿನ ಜನತೆಯ ಪ್ರೀತಿ, ವಿಶ್ವಾಸ, ಶ್ರೀಮಂತ ಪರಂಪರೆಯ, ಭವ್ಯವಾದ ಇತಿಹಾಸವನ್ನು ಭಿತ್ತರಿಸುವ ತನ್ನದೇಯಾದ ಸಂಸ್ಕೃತಿಗಳಿಂದ ಕೂಡಿದ ಈ ನಾಡು ಪ್ರವಾಸಿಗರನ್ನು ಪ್ರಾಚೀನ ಕಾಲದಿಂದಲೂ ತನ್ನತ್ತ ಕೈಬೀಸಿ ಕರೆಯುತ್ತಿದೆ. ಇಂತಹ ಐತಿಹಾಸಿಕ ಮಹತ್ವವನ್ನು ಪಡೆದಿರುವ ಹೇಮಗಿರಿ ಕ್ಷೇತ್ರದ ಮಹತ್ವವನ್ನು ಅರಿಯ-ಬೇಕಾಗಿದೆ.

ಭೃಗುಮುನಿ ಮಹರ್ಷಿಗಳು ತಪಸ್ಸನ್ನು ಕೈಗೊಳ್ಳಲು ಉತ್ತರಭಾರತದಿಂದ ದಕ್ಷಿಣ ಭಾರತಕ್ಕೆ ಬರಲು ಪ್ರಶಾಂತವಾದ ವಾತಾವರಣವನ್ನು ಹುಡುಕುತ್ತಾ ಈ ಹೇಮಗಿರಿ ಕ್ಷೇತ್ರಕ್ಕೆ ಬಂದು ಇಲ್ಲಿನ ರಮ್ಯವಾದ ವಾತಾವರಣಕ್ಕೆ ಮಾರುಹೋಗಿ ತಪಸ್ಸಿನಿಂದ ಮಹಾವಿಷ್ಣುವನ್ನು ಮೆಚ್ಚಿಸಿ ಆತನ ದರ್ಶನ ಪಡೆದು ವರವನ್ನು ಕೇಳುವಂತೆ ಹೇಳಲು ಮಹರ್ಷಿಗಳು ಆತನನ್ನು ಇಲ್ಲೇ ನೆಲೆಯೂರಲು ತಿಳಿಸಿದಾಗಿಯೂ ಅದರಂತೆ ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯ ಅವತಾರನಾಗಿ ನೆಲೆನಿಂತು ಕಲ್ಯಾಣಕಾರ್ಯಗಳನ್ನು ನೆರವೇರಿಸುತ್ತಾ ಬಂದಿರುವುದಕ್ಕೆ ನಮಗೆ ಸಾಕ್ಷ್ಯಾಧಾರಗಳು ಇಂದಿಗೂ ಕಾಣಸಿಗುತ್ತವೆ. ಪ್ರಕೃತಿಯು ಸಹ ಅದಕ್ಕೆ ತಕ್ಕುದಾಗಿ ಸೌಂದರ್ಯಯುತವಾಗಿ ಕಂಗೊಳಿಸುತ್ತಲೇ ಬಂದಿದೆ.

ಹೇಮಗಿರಿಯಲ್ಲಿ ಬೆಟ್ಟಗುಡ್ಡಗಳು ಸುತ್ತ-ಮುತ್ತಲೂ ಕಂಡುಬರುವುದಲ್ಲದೆ ಅನತಿ ದೂರದಲ್ಲಿ ಹೇಮಾವತಿ ನದಿಗೆ ಅಣೆಕಟ್ಟೆಯೊಂದು ಕಟ್ಟಲಾಗಿದ್ದು ಕೃಷಿಗೆ ತುಂಬಾ ಅನುಕೂಲವನ್ನುಂಟು ಮಾಡಿದೆ. ಸಾಮಾಜಿಕ ಅರಣ್ಯವನ್ನು ಇಲ್ಲಿ ಬೆಳೆಸಲಾಗುವುದರ ಜೊತೆಗೆ ಕಿರು ಅರಣ್ಯಗಳನ್ನು ಸಹ ಸುತ್ತಮುತ್ತ ಕಾಣಬಹುದಾಗಿದೆ. ಬೆಳ್ಳಿಬೆಟ್ಟವೊಂದು ಇದ್ದು ಇಲ್ಲಿ ಬೆಳ್ಳಿ ನಿಕ್ಷೇಪ ಹಾಗೂ ಚಿನ್ನದ ಅದಿರಿನ ನಿಕ್ಷೇಪಗಳಿರುವುದು ಸಹ ಪತ್ತೆಯಾಗಿದ್ದು ಮಹತ್ವವನ್ನು ಪಡೆದುಕೊಂಡಿದೆ.

ಹೇಮಗಿರಿ ಬೆಟ್ಟದ ತಪ್ಪಲಿನಲ್ಲೇ ಹರಿಯುವ ಹೇಮಾವತಿ ನದಿಯು ವಿಶಾಲವಾದ ಪಾತ್ರವನ್ನುಂಟು ಮಾಡಿರುವುದರಿಂದ ಮರಳು ಸಾಕಷ್ಟು ಸಂಗ್ರಹಣೆಯಾಗಿ ಮರಳು ಗಣಿಗಾರಿಕೆಗೆ ಈ ಸ್ಥಳ ಮಹತ್ವ ಪಡೆದುಕೊಳ್ಳುತ್ತಿದೆ. ಇತ್ತೀಚಿನ ದಿನಗಳಲ್ಲಿ ಮರಳಿಗೆ ಚಿನ್ನದಂತಹ ಬೆಲೆಯಾಗಿದ್ದು ಈ ಸ್ಥಳದಿಂದ ಸಾಂಸ್ಕೃತಿಕ ನಗರಿ, ಸಕ್ಕರೆನಗರಿ, ಉದ್ಯಾನನಗರಿಗಳವರೆಗೂ ಮರಳು ಸಾಗಾಣಿಕೆಯಾಗುತ್ತಿರುವುದರಿಂದ ಈ ಸ್ಥಳಕ್ಕೆ ಮತ್ತೊಂದು ಗರಿ ಸೇರ್ಪಡೆಗೊಳ್ಳುತ್ತಿದೆ.

ಈ ಕ್ಷೇತ್ರವು ಗುರುಕುಲವನ್ನು ಭೃಗುಮುನಿ ಆಶ್ರಮವನ್ನು ಹೊಂದಿದ್ದು ಶೈಕ್ಷಣಿಕ ಪ್ರಗತಿಗೆ ಪೂರಕವಾಗಿರುವುದರಿಂದಲೂ ಶೈಕ್ಷಣಿಕ ಮಹತ್ವವನ್ನು ಪಡೆದುಕೊಂಡಿದೆ. ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ಸಂಸ್ಕೃತ ಪಾಠಶಾಲೆ, ಪ್ರಾಥಮಿಕ ಶಾಲೆ, ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜನ್ನು ಹೊಂದಿದ್ದು ಸುತ್ತಮುತ್ತಲಿನ ಗ್ರಾಮಗಳ ಜನಸಮುದಾಯವನ್ನು ಸುಶಿಕ್ಷಿತ ಸತ್ಪ್ರಜೆಗಳನ್ನಾಗಿ ರೂಢಿಸಿ ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಮಹತ್ವ ಪಡೆದುಕೊಳ್ಳುತ್ತಿದೆ.

**ಅರ್ಥ ಮತ್ತು ವಿಶೇಷ:** ಮಾನವನು ಪುರಾತನಕಾಲದಲ್ಲಿ ಗುಹೆಗಳಲ್ಲಿ ಹಾಗೂ ಮರದ ಪೊಟರೆಗಳಲ್ಲಿ ವಾಸಿಸುತ್ತಿದ್ದು, ಕಾಲಕ್ರಮೇಣ ಮನೆಮಠಗಳನ್ನು ನಿರ್ಮಾಣ ಮಾಡಿಕೊಂಡು ಸಾಂಘಿಕ ಜೀವನವನ್ನು ಆರಂಭಿಸಿದನು. ಮಾನವ ನಾಗರಿಕನಾದಂತೆ ಗುಂಪುಗುಂಪಾಗಿ ವಾಸಿಸಲು ತೊಡಗಿ ಗ್ರಾಮಗಳ ಅಭ್ಯುದಯಕ್ಕೆ ನಾಂದಿಯಾಯಿತು. ಮೊದಮೊದಲು ಮಾನವ ತನ್ನನ್ನು ತಾನು ಗುರುತಿಸಿಕೊಳ್ಳಲು ಹೆಸರೊಂದನ್ನು ಇಟ್ಟುಕೊಂಡಂತೆ ಊರು, ಗ್ರಾಮ, ಪಟ್ಟಣ, ನಗರಗಳನ್ನು ಗುರುತಿಸಲು ಸಹ ಕೆಲವು ಹೆಸರುಗಳನ್ನು ಸೂಚಿಸಿಕೊಂಡನು. ಅಲ್ಲಲ್ಲಿಯ ಸಂಸ್ಕೃತಿಗಳಿಗೆ ಅನುಗುಣವಾದ ಸ್ಥಳನಾಮಗಳು ಉಗಮಗೊಂಡವು. ಅಂತೆಯೇ ಸಾಮಾಜಿಕ, ರಾಜಕೀಯ, ಐತಿಹಾಸಿಕ ಹಾಗೂ ಧಾರ್ಮಿಕವಾಗಿಯೂ ಸ್ಥಳನಾಮಗಳು ರೂಪುಗೊಂಡಿರುವುದನ್ನು ಕಾಣಬಹುದಾಗಿದೆ. ಸ್ಥಳನಾಮಗಳ ಹುಟ್ಟು ನಿನ್ನೆ ಮೊನ್ನೆಯದಲ್ಲ ಅವು ಮಾನವನ ನಾಗರಿಕತೆಯಷ್ಟೇ ಹಳೆಯವು. ಹಾಗೂ ಪುರಾತನ ಕಾಲದ ಜೀವನ ಸೃಷ್ಟಿಯ ಪಳೆಯುಳಿಕೆಗಳು ಮಾನವನ ದೈನಂದಿನ ಬದುಕಿನಲ್ಲಿ ಬೆಳವಣಿಗೆಯಾದಂತೆಲ್ಲ, ಸ್ಥಳನಾಮಗಳಲ್ಲೂ ಬದಲಾವಣೆಗಳಾದವು. ಭೌಗೋಳಿಕ, ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಮತ್ತು ಜಾನಪದೀಯ ಅಂಶಗಳ ಮೂಲಕ ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ

ಸ್ಥಳನಾಮಗಳು ಹುಟ್ಟಿಕೊಂಡವು. ಈ ಹಿನ್ನೆಲೆಯಿಂದ ಪ್ರಾಪ್ತಿಯಾಗಿರುವುದನ್ನು ಮನ-ಗಾಣಬಹುದಾಗಿದೆ.

'ಹೇಮಗಿರಿ' ಎಂಬುದು ಹೇಮ+ಗಿರಿ ಎಂಬ ಎರಡು ಪದಗಳು ಸೇರಿಯಾದುದಾಗಿದೆ. ಪೂರ್ವಪದವಾದ 'ಹೇಮ' ಎಂದರೆ 'ಚಿನ್ನ' ಎಂದರ್ಥವಾಗಿದೆ. ಚಿನ್ನ ಎಂಬುದು ಅಮೂಲ್ಯವಾದುದು, ಅಪೂರ್ವವಾದುದಾಗಿದೆ. 'ಗಿರಿ' ಎಂಬ ಉತ್ತರ ಪದದ ಅರ್ಥ ಬೆಟ್ಟ, ಗುಡ್ಡ, ಎತ್ತರ, ವೈವಿಧ್ಯ, ವಿಪುಲ, ಶ್ರೇಷ್ಠ ಎಂಬುದಾಗಿದೆ. ಈ ಎರಡು ಪದಗಳ ಅರ್ಥಗಳ ಸಾರ್ಥಕ್ಯಗಳನ್ನು ಮನಗಂಡೇ ನಮ್ಮ ಜನಪದರು ಈ ಕ್ಷೇತ್ರಕ್ಕೆ 'ಹೇಮಗಿರಿ' ಎಂಬ ಸ್ಥಳನಾಮದ ಅಂಕಿತವಿತ್ತರು ಎಂಬುದರಲ್ಲಿ ಸಂದೇಹವಿಲ್ಲ. ಇದಕ್ಕೆ ಈ ಹಿಂದೆ 'ಹೇಮಾದ್ರಿ' ಎಂಬ ಹೆಸರು ಸಹ ಇತ್ತು. ಹೇಮಾದ್ರಿ ಎಂದರೆ ಚಿನ್ನದ ಗಣಿಯ ನಿಕ್ಷೇಪ ಎಂಬರ್ಥವಿದೆ. ಹೇಮಗಿರಿಗೆ 'ಸುವರ್ಣಗಿರಿ' 'ಕನಕಗಿರಿ' ಎಂಬ ಹೆಸರುಗಳು ಅನ್ವಯಿಸುತ್ತಿದ್ದು 'ರತ್ನಗಿರಿ' ಎಂತಲೂ ಕರೆಯಲ್ಪಡುತ್ತಿದ್ದುದು ಇಲ್ಲಿನ ಸ್ಥಳೀಕರಿಂದ ತಿಳಿದುಬಂದ ಅಂಶವಾಗಿದೆ. ಒಟ್ಟಾರೆ ಚಿನ್ನದಗಿರಿ (ಬೆಟ್ಟ) ಎಂಬುದು ಇದಕ್ಕೆ ಹೊಂದಿಕೊಳ್ಳುತ್ತಿರುವ ನಾಮಾಂಕಿತವಾದುದರಿಂದ 'ಹೇಮಗಿರಿ' ಸೂಕ್ತವಾದ ಭೌಗೋಳಿಕ ಹಿನ್ನೆಲೆಯ ಹೆಸರುವೆಂಬುದರಲ್ಲಿ ಸಂದೇಹವಿಲ್ಲವಾಗಿದೆ.

**ಊರಿನ ಸಮೀಕ್ಷೆ:** ಹೇಮಗಿರಿ ಕ್ಷೇತ್ರವು ಧಾರ್ಮಿಕ ಕೇಂದ್ರವಾಗಿದೆ. ಇಲ್ಲಿ ಹೇಮಗಿರಿ ಬೆಟ್ಟವೂ ಅದರ ತಪ್ಪಲಿನಲ್ಲಿ ಹೇಮಾವತಿ ನದಿಯು ಅದರ ಸುತ್ತಮುತ್ತಲೂ ಹಸಿರಿನಿಂದ ಕೂಡಿರುವ ಪಚ್ಚೆ ಪೈರುಕಂಡುಬರುತ್ತದೆ. ಬೆಟ್ಟದ ಮತ್ತೊಂದು ತಪ್ಪಲಿನಲ್ಲಿ ಭೃಗುಮುನಿ ಆಶ್ರಮ. ಶ್ರೀಕಲ್ಯಾಣವೆಂಕಟರಮಣಸ್ವಾಮಿ ಶಿಕ್ಷಣ ಸಂಸ್ಥೆಗಳು ಇರುವುದು, ಮತ್ತೊಂದು ಭಾಗದಲ್ಲಿ ಅಲ್ಲಲ್ಲಿ ಸುಮಾರು ೩೦ ರಿಂದ ೪೦ ಗುಡಿಸಲುಗಳು ಹಿಂದುಳಿದ ಜನಾಂಗದವರದ್ದು ನಿರ್ಮಾಣಗೊಂಡಿದ್ದು ಈಗ ಅವರು ಸಹ ವಲಸೆ ಹೋದ ಕಾರಣ ಕೇವಲ ಮೂರ್‍ನಾಲ್ಕು ಗುಡಿಸಲುಗಳು ಮಾತ್ರ ಇವೆ. ಉಳಿದಂತೆ ಗದ್ದೆ ಮತ್ತು ತೋಟಗಳಿಂದಲೂ ಕಾಲುವೆಯಿಂದಲೂ ರಮ್ಯವಾದ ತಾಣವಾಗಿ ಕಂಗೊಳಿಸುತ್ತಿದೆ.

ಜನಸಮುದಾಯವೂ ಇಲ್ಲಿ ಕಂಡುಬರದಿದ್ದರೂ ಈ ಸುಕ್ಷೇತ್ರದ ಅನತಿ ದೂರದಲ್ಲಿ ಗ್ರಾಮಗಳು ನಿರ್ಮಾಣಗೊಂಡಿವೆ. ಹೇಮಗಿರಿ ಕ್ಷೇತ್ರದ ಉತ್ತರ ಭಾಗದಲ್ಲಿ ಒಂದು ಕಿಲೋಮೀಟರ್ ದೂರದಲ್ಲಿ ಕುಪ್ಪಳ್ಳಿ ಗ್ರಾಮವೂ ದಕ್ಷಿಣ ಭಾಗದ ಒಂದು ಕಿಲೋಮೀಟರ್ ದೂರದಲ್ಲಿ ಬಂಡಿಹೊಳೆ ಗ್ರಾಮವೂ ಪೂರ್ವಭಾಗದಲ್ಲಿ ಬಿ.ಬಿ.ಕಾವಲ್

ಮತ್ತು ಪಶ್ಚಿಮಭಾಗದಲ್ಲಿ ಹೇಮಾವತಿ ನದಿಯಾಚೆಗೆ ನಾಟನಹಳ್ಳಿ ಗ್ರಾಮವಿದೆ. ಹೇಮಗಿರಿಯ ಆಗ್ನೇಯ ದಿಕ್ಕಿನಲ್ಲಿ ಲಕ್ಷ್ಮೀಪುರ ಗ್ರಾಮವೂ ಇದೆ. ಈ ಗ್ರಾಮಗಳಿಗೆಲ್ಲಾ ಧಾರ್ಮಿಕ ಸುಕ್ಷೇತ್ರವೆಂದರೆ ಹೇಮಗಿರಿಯಾಗಿದೆ. ಹಾಗಾಗಿ ಈ ಗ್ರಾಮಗಳ ಸಮೀಕ್ಷೆಯನ್ನು ಮುಂದಿನಂತೆ ಮಾಡಲಾಗಿದೆ.

**ಕುಪ್ಪಳ್ಳಿ:** ಹೇಮಗಿರಿಯ ಉತ್ತರಭಾಗದಲ್ಲಿರುವ ಗ್ರಾಮವೇ ಕುಪ್ಪಳ್ಳಿ. ಈ ಗ್ರಾಮಕ್ಕೆ ಸುಮಾರು ೪೦೦ ವರ್ಷಗಳ ಇತಿಹಾಸವಿದೆ. ಕೆ.ಆರ್.ಪೇಟೆ ತಾಲ್ಲೂಕಿನ ಹೊಸಹೊಳಲು ಗ್ರಾಮದಿಂದ ಹಾಗೂ ಮೇಲುಕೋಟೆಯಿಂದ ಬ್ರಾಹ್ಮಣರುಗಳು ಬಂದು ಮೊದಲು ಈ ಗ್ರಾಮದಲ್ಲಿ ವಾಸ್ತವ್ಯ ಹೂಡಿದರು. ಅನಂತರದಲ್ಲಿ ಕಮ್ಮಾರರು, ಚಮ್ಮಾರರು, ಶೂದ್ರರು ಮುಂತಾದ ಜನಸಮುದಾಯಗಳು ಬಂದು ನೆಲೆಸಿದವು. ಕೂಪವಾದ ಸ್ಥಳದಲ್ಲಿ ಗ್ರಾಮವೂ ನಿರ್ಮಾಣಗೊಂಡಿದ್ದು ತಿಪ್ಪೆಯನ್ನು ಇಲ್ಲಿ ಹಾಕಲಾಗುತ್ತಿತ್ತು. ಹಾಗಾಗಿ ತಿಪ್ಪೆಹಳ್ಳಿಯೆಂತಲೂ ತಿಪ್ಪೆಯೂ ಕುಪ್ಪೆಯಾಗಿ ಕುಪ್ಪೆಹಳ್ಳಿ – ಕುಪ್ಪಹಳ್ಳಿ ಕುಪ್ಪಳ್ಳಿಯಾಗಿ ಕಾಲಕ್ರಮೇಣ ಪರಿವರ್ತನೆಗೊಂಡಿತು.

**ತಿಪ್ಪೆಹಳ್ಳಿ–ತಿಪ್ಪಹಳ್ಳಿ–ಕುಪ್ಪೆಹಳ್ಳಿ–ಕುಪ್ಪಹಳ್ಳಿ– ಕುಪ್ಪಳ್ಳಿ**

ಈಗ ಕುಪ್ಪಳ್ಳಿ ಗ್ರಾಮವೂ ಸರಿಸುಮಾರು ೧೨೦೦ ಜನಸಂಖ್ಯೆಯನ್ನೊಳಗೊಂಡಿದೆ. ಇಲ್ಲಿ ಬ್ರಾಹ್ಮಣರು, ಲಿಂಗಾಯಿತರು, ಒಕ್ಕಲಿಗರು, ನಾಯಕರು, ಮಾದಿಗರು, ಕಮ್ಮಾರರು, ಚಮ್ಮಾರರು ಮೊದಲಾದ ಜನಸಮುದಾಯಗಳು ಕಂಡುಬರುತ್ತವೆ. ಹಿಂದೂ ಧರ್ಮವೇ ಉನ್ನತಮಟ್ಟದಲ್ಲಿದ್ದು ರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿ ಒಂದು ನೆಲೆಸಿದ್ದುದರಿಂದ ವೈಷ್ಣವ ಮತವೂ ಇಲ್ಲಿ ಉತ್ತುಂಗ ಸ್ಥಾನದಲ್ಲಿತ್ತೆಂಬುದು ಐತಿಹ್ಯವಾಗಿದೆ.

ಈ ಗ್ರಾಮವೂ ಹೇಮಾವತಿ ನದಿಯ ಸಮೀಪದಲ್ಲೇ ಇರುವುದರಿಂದ ನೀರಾವರಿಯ ಭೂಮಿಯನ್ನೊಳಗೊಂಡಿದೆ. ತೆಂಗು, ಅಡಿಕೆ, ತೋಟಗಳು ಬಾಳೆಯ ತೋಟಗಳು ಸುತ್ತಲೂ ಕಂಗೋಳಿಸುತ್ತವೆ. ಭತ್ತ, ರಾಗಿ, ಕಬ್ಬು, ಅವರೆ, ಹುರುಳಿ ಮೊದಲಾದ ದವಸಧಾನ್ಯಗಳನ್ನು ಬೆಳೆಯಲಾಗುತ್ತದೆ. ಒಂದೆರಡು ಮನೆಗಳಲ್ಲಿ ಬುಟ್ಟಿ ಹೆಣೆಯುವ, ಮಂಕರಿ ಹೆಣೆಯುವ ಕುಶಲ ಗುಡಿಕೈಗಾರಿಕೆ ಕಂಡುಬರುತ್ತದೆ. ಪಶುಪಾಲನೆ, ಕುರಿಸಾಕಾಣಿಕೆ ಉಪಕಸುಬುಗಳಾಗಿ ಕಂಡುಬರುತ್ತದೆ. ಈ ಗ್ರಾಮದಲ್ಲಿ ಕಂಡುಬರುವ ವಿಶೇಷವೆಂದರೆ ಬೇಟೆಗಾರಿಕೆಯ ಕಸುಬು. ಪ್ರತಿ ಸೋಮವಾರದಂದು

ಇಂದಿಗೂ ಈ ಗ್ರಾಮದವರೂ ಬೇಟೆಯಾಡಲು ಅನತಿದೂರದಲ್ಲಿರುವ ಕಾಡಿಗೂ ಕಬ್ಬಿನ ಗದ್ದೆಗಳಿಗೂ ತೆರಳುತ್ತಾರಂತೆ, ಹಂದಿಬೇಟೆ ಇಲ್ಲಿನ ವಿಶೇಷ ಜೊತೆಗೆ ಪ್ರಾಮುಖ್ಯ ಗಳಿಸಿರುವುದು ಕೂಡ ಆಗಿದೆ. ಈ ಗ್ರಾಮದಲ್ಲಿ ಬೇಟೆಯಾಡುವವರ ಸಂಘವೇ ಇದೆಯಂತೆ, ಬೇಟೆಯಾಡಲು ಇವರು ಭರ್ಜಿ, ಈಟಿ, ಬಿಲ್ಲು, ಬಾಣಗಳು, ಬಲೆ, ಕೋಲು ಮತ್ತು ನಾಯಿಗಳನ್ನು ಬಳಸಿಕೊಳ್ಳುತ್ತಾರೆ.

ಕುಪ್ಪಳ್ಳಿಯಲ್ಲಿ ಹಲವು ದೇವಸ್ಥಾನಗಳಿವೆ. ಶ್ರೀರಾಮನ ದೇವಸ್ಥಾನ, ಬಸವೇಶ್ವರ ದೇವಸ್ಥಾನ, ಮಾರಮ್ಮನ ದೇವಸ್ಥಾನ, ಕೆರಗೋಡಮ್ಮ ಮತ್ತು ಕಾಡಬಸಪ್ಪನ ದೇವಸ್ಥಾನಗಳಿವೆ. ರಂಗದಹಬ್ಬ ಈ ಗ್ರಾಮದ ವಿಶೇಷ ಹಬ್ಬವಾಗಿದ್ದು ಬೇಸಿಗೆಕಾಲದಲ್ಲಿ ನವರಾತ್ರಿಗಳಲ್ಲಿ ನಡೆಯುತ್ತದೆ.

'ಸುದರ್ಶನ್' ಎಂಬುವವರು ಈ ಗ್ರಾಮದವರೇ ಆಗಿದ್ದು ಇವರು ಆರ್.ಎಸ್.ಎಸ್‌ನ ಅಧ್ಯಕ್ಷರಾಗಿದ್ದರು. ಇವರು ಹಿಂದೂ ಧರ್ಮದ ಏಳ್ಗೆಗಾಗಿ ಭಾರತದಾದ್ಯಂತ ಹೋರಾಟ ನಡೆಸಿದ ಮಹಾನುಭಾವರಾಗಿದ್ದು ಕುಪ್ಪಳ್ಳಿ ಗ್ರಾಮದ ಕೀರ್ತಿಯು ಹರಡಲು ಕಾರಣಕರ್ತರಾದವರು. ಅಲ್ಲದೆ ದೊಡ್ಡೇಗೌಡರು ಗ್ರಾಮದ ಮುಖಂಡರಾಗಿದ್ದು ಹೇಮಗಿರಿಕ್ಷೇತ್ರದ ಅಭಿವೃದ್ಧಿಗೆ ದುಡಿದ ಮಹನೀಯರಾಗಿದ್ದಾರೆ. ಛೇರ್ಮನ್ ತಿಮ್ಮೇಗೌಡರು, ಸೀತಾರಾಮಯ್ಯನವರು, ವೆಂಕಟಗಿರಿ ರಾಮಯ್ಯನವರು ಗ್ರಾಮದ ಪ್ರಮುಖ ಮುಖಂಡರುಗಳಾಗಿದ್ದಾರೆ. ಈ ಗ್ರಾಮದ ಆರ್ಥಿಕ ಸ್ಥಿತಿಯು ಉತ್ತಮವಾಗಿದ್ದು ಎಲ್ಲರೂ ವ್ಯವಸಾಯದಲ್ಲಿ ಪಾಲ್ಗೊಳ್ಳುತ್ತಾರೆ. ಶಿಕ್ಷಣವನ್ನು ಸಹ ಪಡೆದಿರುವ ಇಲ್ಲಿನ ಜನತೆ ಸಾಕ್ಷರತೆಯನ್ನು ಉತ್ತಮವಾಗಿ ಸಾಧಿಸಿದೆ. ಶಿಕ್ಷಣ, ತಾಂತ್ರಿಕ ಮುಂತಾದ ಸೇವಾ ವಲಯಗಳಲ್ಲಿ ಸೇವೆಯನ್ನು ಸಲ್ಲಿಸುವವರು ಸಹ ಗ್ರಾಮದಲ್ಲಿ ರುವರು. ಒಟ್ಟಾರೆ ಗ್ರಾಮದ ಜನತೆ ಉತ್ತಮ ಬಾಂದವ್ಯದಿಂದ ಪ್ರೀತಿ ವಿಶ್ವಾಸ ಗಳಿಂದ ಬಾಳ್ವೆಯನ್ನು ನಡೆಸುತ್ತಿದ್ದಾರೆ.

ಕುಪ್ಪಳ್ಳಿ ಗ್ರಾಮವೂ ಕವಿಗಳ ಬೀಡು ಆಗಿದೆ. ಇಲ್ಲಿ ನಾಲ್ಕಾರು ಜನ ಪ್ರಮುಖ ಸಾಹಿತಿಗಳಿದ್ದು 'ಹೇಮಗಿರಿ ಗೀತೆ' ರಚನೆ ಮಾಡಿದಂತಹ ಕೆ.ಕೆ.ಮೂರ್ತಿಯವರು ಇಲ್ಲಿಯವರೇ. ಹೀಗೆ ಕುಪ್ಪಳ್ಳಿ ಸ್ಥಳನಾಮವೂ ಕವಿಗಳಿಗೂ ನಂಟಾದ ವಿಷಯ ಅರಿಯಬಹುದಾಗಿದೆ.

**ಬಂಡಿಹೊಳೆ ಗ್ರಾಮಸಮೀಕ್ಷೆ:** ಹೇಮಗಿರಿಯ ದಕ್ಷಿಣ ಭಾಗದಲ್ಲಿರುವ ಗ್ರಾಮವೇ ಬಂಡಿಹೊಳೆಯಾಗಿದೆ. ಬಹಳ ಹಿಂದಿನ ಕಾಲದಲ್ಲಿ ಜನರು ಈ ಗ್ರಾಮಕ್ಕೆ ಬಂದು ಬಂಡಿಯಲ್ಲೇ ತೆರಳುತ್ತಿದ್ದರು. ಹಾಗೇ ಬಂದು ಹೋಗುವಾಗ ರಸ್ತೆಯಿರದ ಕಾರಣ ಹೊಳೆಯಲ್ಲೇ ದಾಟಿ ಬಂಡಿಯಲ್ಲಿ ಬರುತ್ತಿದ್ದಾಗ ಜಾರುತ್ತಿದ್ದುದರಿಂದ ಬಂಡಿಹೊಳೆ ಎಂಬ ಹೆಸರೇ ಈ ಗ್ರಾಮಕ್ಕೆ ಬಂದಿತೆಂಬ ಐತಿಹ್ಯವಿದೆ. ಈ ಗ್ರಾಮದಲ್ಲಿ ಏಳು ಊರುಗಳಿದ್ದು (ಕಾಕನಹಳ್ಳಿ, ಬಿಳಿಗನಹಳ್ಳಿ, ಶಿವಪುರ, ಘಟಿಕನಹಳ್ಳಿ, ಚಾವಲಾಪುರ, ಹಂಚಿಕಾಟನಹಳ್ಳಿ, ಬಂಡಿಹೊಳೆ) ಏಳೂರಮ್ಮ ಎಂಬ ದೇವಸ್ಥಾನವು ಸಹ ಇದೆ. ಈಗ ಈ ಊರುಗಳೆಲ್ಲ ಸೇರಿಕೊಂಡು ಬಂಡಿಹೊಳೆ ಎಂಬ ದೊಡ್ಡ ಗ್ರಾಮವಾಗಿದೆ. ಈ ಗ್ರಾಮದ ಹೆಸರಿಗೆ ಮತ್ತೊಂದು ಜನಪದ ಹಿನ್ನೆಲೆಯಿದೆ. ಅದೇನೆಂದರೆ ಏಳು ಜನ ಅಕ್ಕ-ತಂಗಿಯರು ಬಂಡಿಯಲ್ಲಿ ಈ ಸ್ಥಳಕ್ಕೆ ಆಗಮಿಸುತ್ತಿರುವಾಗ ಯಾವುದೋ ಅನಾಹುತ ಸಂಭವಿಸಿ ದಿಕ್ಕುತಪ್ಪಿ ಬಂಡಿಯನ್ನು ಹೊಳೆಯಬಳಿಯಲ್ಲೇ ಬಿಟ್ಟುಹೋಗಿ ತಮ್ಮ ಸ್ಥಳವನ್ನು ಸೇರಿದರು. ಹಾಗಾಗಿ ಈ ಗ್ರಾಮದಲ್ಲಿಯೇ ಬಂಡಿಯನ್ನು ಹೊಳೆಯ ಬಳಿ ಬಿಟ್ಟು ಹೋದುದರಿಂದ ಬಂಡಿಹೊಳೆ ಎಂಬ ಹೆಸರು ಬಂದಿತೆಂಬ ಕಥೆಯ ಇದೆ.

ಈ ಗ್ರಾಮದಲ್ಲಿ ಜನಸಂಖ್ಯೆಯು ೨೦೧೧ರ ಜನಗಣತಿಯ ಪ್ರಕಾರ ಸರಿಸುಮಾರು ೨೫೦೦ ಇದೆ. ಹೆಂಗಸರಿಗಿಂತ ಗಂಡಸರ ಸಂಖ್ಯೆಯೇ ಹೆಚ್ಚಾಗಿದೆ. ಈ ಗ್ರಾಮದಲ್ಲಿ ಹಿಂದೂ ಧರ್ಮಿಯರು ಸಂಪೂರ್ಣವಾಗಿದ್ದು ಉಳಿದ ಧರ್ಮದವರು ಕಂಡುಬರುವುದಿಲ್ಲ, ಹಿಂದೂಧರ್ಮದ ಉಪಜಾತಿ/ಜಾತಿಗಳಾದ ಒಕ್ಕಲಿಗರು ಬಹುತೇಕ ಕಂಡುಬರುತ್ತಾರೆ. ಉಳಿದಂತೆ ಕುಂಬಾರರು, ಲಿಂಗಾಯಿತರು, ಬ್ರಾಹ್ಮಣರು, ಗಾಣಿಗ ಶೆಟ್ಟರು, ಮಡಿವಾಳಶೆಟ್ಟರು, ವಡ್ಡರು, ಈಡಿಗರು, ಆಚಾರರು ಮೊದಲಾದ ಜನಸಮುದಾಯಗಳು ಇಲ್ಲಿ ಕಂಡುಬರುತ್ತವೆ.

ಈ ಊರಿನ ಪ್ರಧಾನವಾದ ಉದ್ಯೋಗವೆಂದರೆ ಬೇಸಾಯ ಹೇಮಾವತಿ ನದಿಯು ಈ ಊರಿನ ಸುತ್ತ ಹರಿಯುವುದರಿಂದ ತರಿ ಜಮೀನನ್ನೊಳಗೊಂಡಿದ್ದು ಭತ್ತ, ಕಬ್ಬು, ತೆಂಗು, ಅಡಿಕೆ ಪ್ರಧಾನ ಬೆಳೆಗಳಾಗಿವೆ. ಗ್ರಾಮದ ಸುತ್ತಮುತ್ತಲೂ ಹಸಿರೇ ಹಸಿರು ಕಂಡುಬರುತ್ತದೆ. ಪಶುಪಾಲನೆ, ಕೋಳಿಸಾಕಾಣಿಕೆ, ಕುರಿಸಾಕಾಣಿಕೆ ಮೊದಲಾದ ಉಪಕಸುಬುಗಳು ಕಂಡುಬರುತ್ತದೆ. ಈಡಿಗ ಸಮುದಾಯದವರು ಪೊರಕೆ ಕಟ್ಟುವುದು, ಮಂಕರಿ ಹೆಣೆಯುವುದು ಮೊದಲಾದ ಉದ್ಯೋಗವನ್ನು ಕೈಗೊಂಡಿದ್ದಾರೆ. ರೇಷ್ಮೆ ಸಾಕಾಣಿಕೆ, ಕಬ್ಬು ಅರೆದು ಬೆಲ್ಲ ಮಾಡುವ ಆಲೆಮನೆಗಳು ಇಲ್ಲಿ ಕಂಡುಬರುತ್ತದೆ. ಈ

ಗ್ರಾಮದಲ್ಲಿ ಸಾಕ್ಷರತೆಯು ಉತ್ತಮಮಟ್ಟದಲ್ಲಿದ್ದು ಪುರುಷರು, ಸ್ತ್ರೀಯರು ಸಮಾನವಾಗಿ ಸಾಕ್ಷರತೆಯನ್ನು ಸಾಧಿಸಿದ್ದಾರೆ.

ವೈದ್ಯಕೀಯ, ತಾಂತ್ರಿಕ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲೂ ಪದವಿಗಳನ್ನು ಪಡೆದಂತಹ ಈ ಗ್ರಾಮದ ಜನತೆ ಸಾರ್ವಜನಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಈ ಗ್ರಾಮದಲ್ಲಿ ಹಲವಾರು ಮಹನೀಯರುಗಳಿದ್ದಾರೆ. ಅವರಲ್ಲಿ ಅರ್ಚಕ ಬಿ.ರಂಗಸ್ವಾಮಿಭಟ್ಟರ ಹೆಸರು ಅಗ್ರಮಾನ್ಯವಾದುದು. ಏಕೆಂದರೆ ಜನಪದಸಾಹಿತ್ಯಕ್ಷೇತ್ರಕ್ಕೆ ಇವರು ನೀಡಿದಂತಹ ಕೊಡುಗೆ ಅಮೋಘವಾದುದಾಗಿದೆ. "ಹುಟ್ಟಿದ ಹಳ್ಳಿ" ೧೯೫೨ರಲ್ಲಿ ಪ್ರಕಟವಾಗಿ ಜನಪದಕ್ಷೇತ್ರಕ್ಕೆ ಇವರ ಕೃತಿ ಆಕರವಾಯಿತೆಂದರೆ ತಪ್ಪಾಗಲಾರದು. ರಂಗಸ್ವಾಮಿ ಭಟ್ಟರು ಬೆಟ್ಟದರಂಗನ ಪೂಜೆಯನ್ನು ಆರಂಭಿಸಿ "ಹೇಮಗಿರಿ ಮಹಾತ್ಮೆ" ಎಂಬ ಪುಸ್ತಕವನ್ನು ಸಹ ರಚನೆ ಮಾಡಿದ್ದಾರೆ. ಶ್ರೀ ಬಸವೇಗೌಡರು ಮಾಜಿ ಛೇರ್ಮನ್‌ರವರು ಬಂಡಿಹೊಳೆಯ ಮುಖಂಡರಾಗಿದ್ದು ಹೇಮಗಿರಿಯ ಶ್ರೇಯೋಭಿವೃದ್ಧಿಗೆ ದುಡಿದಂತಹ ಮಹನೀಯರಾಗಿದ್ದಾರೆ.

ಬಂಡಿಹೊಳೆಯಲ್ಲಿ ಜಲವಿದ್ಯುತ್ ಉತ್ಪಾದನಾ ಕೇಂದ್ರವೊಂದನ್ನು ಸಹ ತೆರೆಯಲಾಗಿದ್ದು ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಲಾಗುತ್ತಿದೆ. ಬಂಡಿಹೊಳೆ, ಹೇಮಗಿರಿ ಪಥದ ಮಧ್ಯದಲ್ಲಿ ಹೇಮಾವತಿ ನದಿಗೆ ಅಣೆಕಟ್ಟು ಕಟ್ಟಲಾಗಿದ್ದು ವ್ಯವಸಾಯಕ್ಕೆ ತುಂಬಾ ಯೋಗ್ಯವಾಗಿದೆ. ಬಂಡಿಹೊಳೆ ಗ್ರಾಮದ ಸುತ್ತಲೂ ಕಾಲುವೆಗಳೆರಡು ಹರಿಯುತ್ತಿದ್ದು ಭತ್ತ, ಕಬ್ಬು ಬೆಳೆಗೆ ತುಂಬಾ ಅನುಕೂಲವಾಗಿದೆ. ಹೊಳೆಯ ಮರಳನ್ನು ಹೊತ್ತು ತರುವುದರಿಂದ ಇತ್ತೀಚಿನ ದಿನಗಳಲ್ಲಿ ಮರುಳುಗಣಿಗಾರಿಕೆಗೆ ತುಂಬಾ ಬೇಡಿಕೆಯಿರುವುದರಿಂದ ಮರಳು ಸಾಗಾಣಿಕೆ ಯಥೇಚ್ಛವಾಗಿ ನಡೆಯುತ್ತಿದೆ. ಹೀಗೆ ಇಲ್ಲಿನ ಆರ್ಥಿಕ ವ್ಯವಸ್ಥೆ ಉತ್ತಮರೀತಿಯಲ್ಲಿ ಕೂಡಿರುತ್ತದೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾದ ಕುಮಾರಸ್ವಾಮಿಯವರು ಬಂಡಿಹೊಳೆ ಗ್ರಾಮದಲ್ಲಿ ಗ್ರಾಮವಾಸ್ತವ್ಯ ಹೂಡಿದ್ದು ಇಲ್ಲಿನ ಶ್ರೀನಿವಾಸಶೆಟ್ಟಿ ಎಂಬುವವರ ಮನೆಯಲ್ಲಿ ತಂಗಿದ್ದರು. ಅಲ್ಲದೆ ಸುವರ್ಣ ಗ್ರಾಮಯೋಜನೆಯಡಿ ಬಂಡಿಹೊಳೆ ಗ್ರಾಮವನ್ನು ಸೇರಿಸಿದ್ದು ಅಭಿವೃದ್ಧಿಯ ಕಾರ್ಯವನ್ನು ಕೈಗೊಳ್ಳಲಾಗಿದೆ.

ಈ ಗ್ರಾಮದಲ್ಲಿ ಹಲವಾರು ದೇವಸ್ಥಾನಗಳಿವೆ. ದೊಡ್ಡಮ್ಮ ತಾಯಿ ದೇವಸ್ಥಾನವಿದ್ದು ದೊಡ್ಡಮ್ಮತಾಯಿಯು ಈ ಗ್ರಾಮದ ದೇವತೆಯಾಗಿದೆ. ಅಲ್ಲದೆ

ಮಾರಮ್ಮನ ದೇವಸ್ಥಾನ, ಆಂಜನೇಯಸ್ವಾಮಿ ದೇವಸ್ಥಾನ, ರಂಗನಾಥಸ್ವಾಮಿ ದೇವಸ್ಥಾನ, ಶ್ರೀರಾಮ ಮಂದಿರ, ಸೋಮೇಶ್ವರ, ಬಸವೇಶ್ವರ, ಶ್ರೀಕಂಠೇಶ್ವರ ದೇವಸ್ಥಾನಗಳು ಸಹ ಇವೆ. ಗ್ರಾಮದಾಚೆ ಏಳೂರಮ್ಮನ ದೇವಸ್ಥಾನವಿದ್ದು ಇಲ್ಲಿ ಏಳು ವಿಗ್ರಹಗಳಿವೆ. ಇಲ್ಲಿನ ಜನತೆ ಹಲವು ಹಬ್ಬಗಳನ್ನು ಆಚರಣೆ ಮಾಡುತ್ತಾರೆ. ಬಂಡಿಹಬ್ಬ, ಕನ್ನಂಬಾಡಿಯಮ್ಮನ ಹಬ್ಬ, ಖಾರಹಬ್ಬ, ತೋಪಿನಹಬ್ಬ, ರಂಗದಹಬ್ಬ, ಪಿತೃಪಕ್ಷ, ಗೌರಿ-ಗಣೇಶನಹಬ್ಬ, ದೀಪಾವಳಿ, ಸಂಕ್ರಾಂತಿ, ಮೊದಲಾದ ಹಬ್ಬಗಳನ್ನು ಆಚರಿಸುತ್ತಾರೆ. ಐದು ವರ್ಷಕ್ಕೊಮ್ಮೆ ದೊಡ್ಡಮ್ಮನ ಹಬ್ಬವನ್ನು ಆಚರಣೆ ಮಾಡುತ್ತಾರೆ. ಹೇಮಗಿರಿಯ ಜಾತ್ರೆ, ತೆಪ್ಪೋತ್ಸವ ವನ್ನು ಸಹ ವಿಜೃಂಭಣೆಯಿಂದ ನಡೆಸುತ್ತಾರೆ. ಹೇಮಗಿರಿಯ ರಥದಲ್ಲಿನ ದೇವರ ವಿಗ್ರಹವನ್ನು ಈ ಗ್ರಾಮದಲ್ಲಿಯೇ ರಂಗನಾಥದೇವಸ್ಥಾನ ನಿರ್ಮಾಣ ಮಾಡಿ ಅಲ್ಲಿ ಇಟ್ಟಿರುತ್ತಾರೆ. ಜಾತ್ರೆಯ ದಿನದಂದು ವಿಗ್ರಹವನ್ನು ತೆಗೆದುಕೊಂಡು ಹೋಗಿ ರಥದಲ್ಲಿರಿಸಿ ಮೆರವಣಿಗೆ ಮಾಡಲಾಗುತ್ತದೆ.

ಒಟ್ಟಾರೆ ಬಂಡಿಹೊಳೆ ಗ್ರಾಮವು ಎಲ್ಲ ರೀತಿಯಲ್ಲೂ ಸಾಂಸ್ಕೃತಿಕ ಹಿನ್ನೆಲೆಯುಳ್ಳ ಗ್ರಾಮವಾಗಿದೆ.

**ಬಿ.ಬಿ.ಕಾವಲ್:**

ಬಿ.ಬಿ.ಕಾವಲ್ ಎಂಬುದರ ಪೂರ್ಣನಾಮ ಬೆಳ್ಳಿಬೆಟ್ಟದ ಕಾವಲ್ ಎಂದೂ. ಈ ಗ್ರಾಮವೂ ಇತ್ತೀಚಿನ ವರ್ಷಗಳಲ್ಲಿ ನಿರ್ಮಾಣಗೊಂಡದ್ದು. ಅಂದರೆ ಸುಮಾರು ೧೯೫೦-೬೦ರ ದಶಕದಲ್ಲಿ ನಿರ್ಮಾಣವಾಗಿದೆ. ಇದು ಹೇಮಗಿರಿಯ ಮತ್ತು ಬೆಳ್ಳಿಬೆಟ್ಟದ ನಡುವೆ ಇರುವ ಗ್ರಾಮವಾಗಿದೆ. ಬೆಳ್ಳಿಬೆಟ್ಟದಲ್ಲಿನ ಬೆಳ್ಳಿಯ ನಿಕ್ಷೇಪವನ್ನು ಇಂದಿರಾಗಾಂಧೀಯ ಕಾಲದಲ್ಲಿ ಪತ್ತೆ ಹಚ್ಚಿದಾಗ ಆ ಬೆಟ್ಟದ ಕಾವಲಿಗಾಗಿ ಹೊಸಹೊಳಲು, ಮನಕನಹಳ್ಳಿ, ಮೇಲುಕೋಟೆ ಮೊದಲಾದ ಸ್ಥಳಗಳಿಂದ ಮಾದಿಗ ಜನಸಮುದಾಯಗಳು ವಲಸೆ ಬಂದು ವೃತ್ತಿ ಹರಸಿ ಬಂದು ನೆಲೆಸಿದ ಸ್ಥಳವೇ ಬಿ.ಬಿ.ಕಾವಲ್ ಆಗಿದೆ.

ಈ ಗ್ರಾಮದಲ್ಲಿ ಸರಿಸುಮಾರು ೪೦೦ ಜನಸಂಖ್ಯೆಯಿದ್ದು ಒಂದೇ ಜಾತಿ-ಯವರಿದ್ದಾರೆ. ಗ್ರಾಮದ ಮಧ್ಯಭಾಗದಲ್ಲಿ ಮಾರಮ್ಮನ ದೇವಸ್ಥಾನವಿದೆ. ಇಲ್ಲಿ ಖುಷ್ಕಿ ಜಮೀನಿರುವುದರಿಂದ ರಾಗಿ, ಹುರುಳಿ, ದವಸಧಾನ್ಯಗಳನ್ನು ಬೆಳೆಯಲಾಗುತ್ತದೆ. ಕೂಲಿಕಾರ್ಮಿಕರು ಈ ಗ್ರಾಮದಲ್ಲಿ ಬಹುತೇಕವಾಗಿ ಇರುವುದರಿಂದ ಆರ್ಥಿಕಸ್ಥಿತಿ-

ಗತಿಗಳು ಸುಧಾರಿಸಿರುವುದಿಲ್ಲ. ಕನ್ನಂಬಾಡಿಯಮ್ಮನ ಹಬ್ಬ, ಉಪವಾಸದ ಹಬ್ಬ, ಗ್ರಾಮೋತ್ಸವ, ಪಿತೃಪಕ್ಷ, ಗೌರಿಗಣೇಶ, ಸಂಕ್ರಾಂತಿ, ಮೊದಲಾದ ಹಬ್ಬಗಳ ಆಚರಣೆ ಸಾಮಾನ್ಯವಾಗಿದೆ. ಹೇಮಗಿರಿ ರಥೋತ್ಸವದಂದು ಪರವನ್ನು ನಡೆಸುತ್ತಾರೆ. ದೂರದ ಸ್ಥಳಗಳಿಂದ ಬರುವ ಜನತೆಗೆ ಗ್ರಾಮದ ವತಿಯಿಂದ ರಂಗನ ಸನ್ನಿಧಿಯ ಬಳಿಯೇ ಅನ್ನಸಂತರ್ಪಣೆ ಕೈಗೊಳ್ಳುತ್ತಾರೆ. ಗ್ರಾಮದಲ್ಲಿ ಸಾಕ್ಷರತೆಯ ಮಟ್ಟ ತೀರಾ ಕಡಿಮೆ-ಯಾಗಿದ್ದು ಉನ್ನತ ಹುದ್ದೆಗಳನ್ನು ಸೇರಿರುವವರ ಸಂಖ್ಯೆ ತೀರಾ ವಿರಳವಾಗಿದೆ. ಆದರೂ ಗ್ರಾಮದ ಜನತೆಯಲ್ಲಿ ಉತ್ತಮ ಸಂಸ್ಕೃತಿಯಿದೆ.

**ನಾಟನಹಳ್ಳಿ**

ನಾಟನಹಳ್ಳಿಗ್ರಾಮವೂ ಹೇಮಗಿರಿಯ ಪಶ್ಚಿಮ ದಿಕ್ಕಿಗೆ ಹೇಮಾವತಿ ನದಿಯಾಚೆ ಇರುವಂತಹ ಗ್ರಾಮವಾಗಿದೆ. ಇದಕ್ಕೆ ಸುಣ್ಣದ ನಾಟನಹಳ್ಳಿ ಎಂತಲೂ ಕರೆಯುತ್ತಾರೆ. ಏಕೆಂದರೆ ಈ ಗ್ರಾಮದಲ್ಲಿ ಸುಣ್ಣ ಬೇಯಿಸಿ ಮಾರುವ ಕೆಲಸವೂ ತುಂಬಾ ಪ್ರಾಮುಖ್ಯತೆ ಯನ್ನು ಗಳಿಸಿಕೊಂಡಿತಂತೆ, ಇಂದಿಗೂ ಸುಣ್ಣವನ್ನು ಈ ಗ್ರಾಮದಲ್ಲಿ ಬೇಯಿಸ-ಲಾಗುತ್ತಿದೆ. ಈ ಗ್ರಾಮಕ್ಕೆ ರತ್ನಗಿರಿ ಎಂಬ ಹೆಸರಿತ್ತು. ಬೆಟ್ಟದರಂಗನು ಸಹ ಮೊದಲು ಈ ಗ್ರಾಮದಲ್ಲೇ ಇದ್ದನೆಂಬ ಐತಿಹ್ಯವಿದೆ. ರಂಗನಾಥಸ್ವಾಮಿಯ ರತ್ನಗಿರಿಯಿಂದ ಹೇಮಾದ್ರಿಗೆ ಬಂದುದರ ಕಥೆ ಜನಪದರಲ್ಲಿ ಹೀಗಿದೆ. ರಂಗನಾಥನು ರತ್ನಗಿರಿಯಲ್ಲಿ ವಾಸವಾಗಿದ್ದ ಸಂದರ್ಭದಲ್ಲಿ ಚಂದಗಾನಹಳ್ಳಿ ಅಮ್ಮಳು ಸಹ ಅನತಿ ದೂರದಲ್ಲೇ ನೆಲೆಗೊಂಡಳೆಂದೂ ಆಕೆಯ ದ್ವಾರಪಾಲಕರಿಗೆ ಹಂದಿ, ಕುರಿ, ಕೋಳಿಯಂತಹ ಪ್ರಾಣಿಗಳ ಬಲಿಯನ್ನು ಹೆಂಡದ ನೈವೇದ್ಯವನ್ನು ಮಾಡುತ್ತಿದ್ದು ರಂಗನಾಥನು ಇದನ್ನು ಕಂಡುಹೊಳೆಯಾಚೆಗಿನ ಹೇಮಾದ್ರಿಗೆ ಬಂದು ನೆಲೆನಿಂತನೆಂಬ ಕಥೆಯಿದೆ. ಮತ್ತೊಂದು ಕಥೆಯು ಸಹ ಹೀಗಿದೆ. ಹಾಸನದ ಕೌಶಿಕದಿಂದ ಮತ್ತು ಮೇಲುಕೋಟೆ-ಯಿಂದ ಕೆಲವು ಬ್ರಾಹ್ಮಣರುಗಳು ಬಂದು ಈ ಗ್ರಾಮದಲ್ಲಿ ನೆಲೆನಿಂತು. ಅನಂತರದಲ್ಲಿ ಶೂದ್ರರು ಈ ಮೇಲ್ವರ್ಗದ ಸೇವೆಗೆಂದು ಬಂದು ನೆಲೆಗೊಂಡರು. ಅದು ಸುಮಾರು ೧೭-೧೮ನೇ ಶತಮಾನವಾಗಿರಬಹುದಾದ ಕಾಲವಾಗಿದ್ದು ಅಂದಿನ ರಾಜನಾಗಿದ್ದ (ಬಹುಶಃ ಹೈದರಾಲಿ ಇಲ್ಲವೇ ಟಿಪ್ಪುಸುಲ್ತಾನ್)ವನು ತನ್ನ ಸಾಮ್ರಾಜ್ಯದಲ್ಲಿ ಒಂದು ವರ್ಷದಿಂದ ಮಳೆಯಾಗದ ಕಾರಣದಿಂದ ಕ್ಷಾಮ ಆವರಿಸ ತೊಡಗಿತು. ಆಗ ರಾಜನಿಂದ ಒಂದಾಜ್ಞೆ ಹೊರಬಿತ್ತು. ಸಾಮ್ರಾಜ್ಯದ ಬ್ರಾಹ್ಮಣ ವರ್ಗದವರನ್ನೆಲ್ಲಾ ಕರೆಸಿ

ಈ ದಶಮೀ, ದ್ವಾದಶಿಯಂತಹ ಶಿವನ ನಕ್ಷತ್ರವಿರುವಂತಹ ಸಮಯದಲ್ಲಿ ಮಳೆಯನ್ನು ಭರಿಸದಿದ್ದರೆ ಕ್ರೂರಶಿಕ್ಷೆಗೊಳಪಡಿಸಲಾಗುವುದೆಂದನು. ಆಗ ಅದು ಫಲಿಸದಿದ್ದಾಗ ಬ್ರಾಹ್ಮಣರನ್ನು ಕಲ್ಗಾಣೆಯ ಶಿಕ್ಷೆಗೊಳಪಡಿಸಲಾಗಿ ಅದರಲ್ಲೊಬ್ಬರು (ಕಲ್ಲಿಗೆ ಹಾಕಿ ಅರೆದು ಬಿಡುವುದೇ ಕಲ್ಗಾಣೆಯ ಶಿಕ್ಷೆ) ನಾಟನಹಳ್ಳಿಯೆಂಬ ಗ್ರಾಮದಲ್ಲಿ ಮುದುಕನೊಬ್ಬನಿರು-ವುದಾಗಿ ಆತನನ್ನು ಕರೆಸಿ ಮಳೆ ಭರಿಸುವಂತೆ ಬೇಡಿಕೊಳ್ಳಲು ತಿಳಿಸಿದನು. ಅದರಂತೆಯೇ ಆತನ ಬಳಿಗೆ ತೆರಳಿ ಬೇಡಿಕೊಂಡಾಗ ಆತ ತನ್ನನ್ನು ಕರೆದುಕೊಂಡು ಹೋಗಿ ಕಾರೆಮುಳ್ಳಿನ (ಕಗ್ಗಲಿ ಮುಳ್ಳು) ಮೇಲೆ ಮಲಗಿಸಿ ಎಂದನಂತೆ, ಅದರಂತೆ ಮಲಗಿಸಿದ ನಂತರ ಜಪತಪಗಳನ್ನು ಕೈಗೊಂಡು ಒಂದು ವಾರದೊಳಗೆ ಭಾರೀ ಮಳೆಯನ್ನು ಭರಿಸಿದನಂತೆ ಹಾಗಾಗಿ ಮುಳ್ಳಿನ ಮೇಲೆ ಮಲಗಿಕೊಂಡು ಮುಳ್ಳು ನಾಟಿಕೊಂಡು ಮಳೆ ಭರಿಸಿದುದರಿಂದ ನಾಟನಹಳ್ಳಿ ಎಂಬ ಹೆಸರು ಬಂದಿತೆಂಬ ಕಥೆಯನ್ನು ಜನಪದರು ತಿಳಿಸಿದರು.

ನಾಟನಹಳ್ಳಿ ಗ್ರಾಮವೂ ಸುತ್ತಮುತ್ತಲೂ ಹಚ್ಚ ಹಸಿರಿನ ಪಚ್ಚೆ ಪೈರಿನಿಂದ ತೆಂಗು, ಅಡಿಕೆಯ ತೋಟಗಳಿಂದ ಕೂಡಿದ ಗ್ರಾಮವಾಗಿದೆ. ಹೇಮಾವತಿಯ ದಡದಲ್ಲೇ ಈ ಗ್ರಾಮವಿರುವುದು. ಈ ಗ್ರಾಮದಲ್ಲಿ ಸರಿಸುಮಾರು ಒಂದು ಸಾವಿರ ಜನಸಂಖ್ಯೆಯಿದ್ದು ಪುರುಷರ ಸಂಖ್ಯೆಯೇ ಹೆಚ್ಚಾಗಿದೆ. ಒಕ್ಕಲಿಗ, ಕಮ್ಮಾರರು, ನಾಯಕರು, ಹರಿಜನ, ಬ್ರಾಹ್ಮಣರು, ಲಿಂಗಾಯಿತರು ಮೊದಲಾದ ಜನಸಮುದಾಯ ಗಳಿವೆ. ಹೊನ್ನಾಲದಮ್ಮನ ಹಬ್ಬವೆಂಬುದು ಈ ಗ್ರಾಮದ ಗ್ರಾಮದೇವತೆಯ ಹಬ್ಬವಾಗಿದೆ. ಈ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಣೆ ಮಾಡುತ್ತಾರೆ. ಈ ದೇವತೆಗೆ ಸ್ತ್ರೀಸಮೂಹ ಎಳ್ಳುಂಡೆ, ಶಾವಿಗೆ, ದೀವಿಗೆಯನ್ನು ಬಾಗಿನವಾಗಿ ಅರ್ಪಿಸಿ ತಮ್ಮ ತಮ್ಮ ಸಂಸಾರಗಳ ಏಳ್ಗೆಯಾಗುವಂತೆ ಪ್ರಾರ್ಥಿಸಿಕೊಳ್ಳುತ್ತಾರೆ. ಇದಲ್ಲದೆ ಸಾಮಾನ್ಯ ಹಬ್ಬಗಳಾದ ಗೌರಿ-ಗಣೇಶ, ಸಂಕ್ರಾಂತಿ, ದೀಪಾವಳಿ, ಪಿತೃಪಕ್ಷಗಳನ್ನು ಆಚರಣೆ ಮಾಡುತ್ತಾರೆ.

ಈ ಗ್ರಾಮದ ಪ್ರಮುಖ ಕಸುಬು ಬೇಸಾಯವಾಗಿದೆ. ಭತ್ತ, ಕಬ್ಬು, ಅಡಿಕೆ, ತೆಂಗು, ಬಾಳೆ, ರಾಗಿ, ಹುರುಳಿ, ಧವಸಧಾನ್ಯಗಳನ್ನು ಬೆಳೆಯಲಾಗುತ್ತದೆ. ಅಪರೂಪದ ಕುಶಲಕರ್ಮಿಗಳಾಗಲೀ, ಗುಡಿಕೈಗಾರಿಕೆಗಳಾಗಲೀ ಇಲ್ಲಿ ಕಂಡುಬರುವುದಿಲ್ಲ. ಪಶುಪಾಲನೆ, ಕುರಿಸಾಕಾಣಿಕೆ, ಕೋಳಿ ಸಾಕಾಣಿಕೆ ಮೊದಲಾದಂತಹ ಉಪಕಸುಬು-

ಗಳನ್ನು ಸಹ ಕೈಗೊಳ್ಳುತ್ತಾರೆ. ಆರ್ಥಿಕ ಪರಿಸ್ಥಿತಿ ಸಾಕಷ್ಟು ಪ್ರಮಾಣದಲ್ಲಿ ಸುಧಾರಣೆ-ಯಾಗಿರುವುದು ಗ್ರಾಮದ ಲಕ್ಷಣದಿಂದಲೇ ಕಂಡುಬರುತ್ತದೆ. ಈ ಗ್ರಾಮದ ಮಹನೀಯರುಗಳಲ್ಲಿ ಬೇಟೆಯಾಡುವುದರಲ್ಲಿ ಪ್ರಾವೀಣ್ಯತೆಗಳಿಸಿಕೊಂಡಿದ್ದ ಬೇಟೆ ಜವರೇಗೌಡರು, ಬಾರಸಿಪಾಯಿ ಜವರಪ್ಪನವರು, ಹನುಮೇಗೌಡರು ಇನ್ನೂ ಮೊದಲಾದ ಮಹನೀಯರನ್ನು ನೆನೆಯಬಹುದು. ಈ ಗ್ರಾಮದಲ್ಲಿ ಆಂಜನೇಯಸ್ವಾಮಿ ದೇವಸ್ಥಾನ ತುಂಬಾ ಪ್ರಸಿದ್ಧವಾಗಿದೆ. ಅಲ್ಲದೇ ಶ್ರೀರಾಮನ ಮಂದಿರ ಮತ್ತು ಮಾರಮ್ಮನ ದೇವಸ್ಥಾನಗಳಿವೆ. ನಾಟನಹಳ್ಳಿ ಗ್ರಾಮದಲ್ಲಿ ಸುಣ್ಣ ಬೇಯಿಸುವುದು ಸಹ ಒಂದು ವಿಶೇಷವಾದ ಉಪಕಸುಬು ಆಗಿರುವುದು ಕಾಣಬಹುದಾಗಿದೆ.

**ಲಕ್ಷ್ಮೀಪುರ:** ಹೇಮಾದ್ರಿಯ ಆಗ್ನೇಯ ದಿಕ್ಕಿನಲ್ಲಿರುವ ಗ್ರಾಮವೇ ಲಕ್ಷ್ಮೀಪುರವಾಗಿದೆ. ಈ ಗ್ರಾಮಕ್ಕೂ ಸಹ ತೀರಾ ಹಳೆಯ ಐತಿಹ್ಯವೇನೂ ಕಂಡುಬರುವುದಿಲ್ಲ. ಇಲ್ಲಿ ಸರಿಸುಮಾರು ೬೦೦ ಜನಸಂಖ್ಯೆಯಿರಬಹುದು. ಬಹುತೇಕವಾಗಿ ಒಕ್ಕಲಿಗ ಸಮುದಾಯವೇ ಕಂಡುಬರುತ್ತದೆ. ಹೇಮಾವತಿ ನದಿಯು ಈ ಗ್ರಾಮದ ಅನತಿ ದೂರದಲ್ಲೇ ಹರಿಯುತ್ತಿದ್ದು. ಹೊಸಪಟ್ಟಣವು ಸಹ ಸಮೀಪದಲ್ಲೇ ಇರುವುದಲ್ಲದೆ ಬೆಳ್ಳಿಬೆಟ್ಟವೂ ಸಹ ಹತ್ತಿರದಲ್ಲೇ ಇರುವುದು. ವ್ಯವಸಾಯವು ಈ ಗ್ರಾಮದ ಪ್ರಮುಖ ಕಸುಬಾಗಿದೆ. ನಂಜೇಗೌಡರು ಕೆ.ಆರ್.ಪೇಟೆ ತಾಲ್ಲೂಕಿನ ಮಾಜಿ ಶಾಸಕರಾಗಿದ್ದು ಈ ಗ್ರಾಮದವರೇ ಆಗಿರುವರು. ಇವರು ಹೇಮಗಿರಿಯ ಶ್ರೇಯೋಭಿವೃದ್ಧಿಗೆ ಬಹಳ ಶ್ರಮಿಸಿದವರು. ಜನರು ಸಾಮಾನ್ಯ ಉಡುಗೆ-ತೊಡುಗೆ ಧರಿಸುವವರಿದ್ದು ಬೇಸಾಯ ದೊಂದಿಗೆ ಉಪಕಸುಬುಗಳನ್ನು ಕೈಗೊಳ್ಳುತ್ತಾರೆ. ಸಾಕ್ಷರತೆಯು ಈ ಗ್ರಾಮದಲ್ಲಿ ಉತ್ತಮ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಬಂಡಿಹಬ್ಬ, ಕನ್ನಂಬಾಡಿಯಮ್ಮನ ಹಬ್ಬ, ಪಿತೃಪಕ್ಷ, ದೀಪಾವಳಿ, ಸಂಕ್ರಾಂತಿ, ಗೌರಿ-ಗಣೇಶ ಮೊದಲಾದ ಹಬ್ಬಗಳನ್ನು ಆಚರಣೆ ಮಾಡುತ್ತಾರೆ. ಹೇಮಗಿರಿಯ ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯ ಜಾತ್ರಾ ಮಹೋತ್ಸವ ಹಾಗೂ ತೆಪ್ಪೋತ್ಸವವನ್ನು ಸಂಭ್ರಮದಿಂದ ಆಚರಿಸುವಲ್ಲಿ ಸಂತೋಷ ದಿಂದ ಪಾಲ್ಗೊಳ್ಳುತ್ತಾರೆ.

# ಅಧ್ಯಾಯ – ೩

# ಭೌಗೋಳಿಕ ಮತ್ತು ಚಾರಿತ್ರಿಕ ಮಹತ್ವ

**ಭೌಗೋಳಿಕ ಪರಿಚಯ ಮತ್ತು ಮಹತ್ವ:** ಹೇಮಗಿರಿಯು ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಒಂದು ಪ್ರಸಿದ್ಧ ಪಾವನಕ್ಷೇತ್ರವಾಗಿದೆ. ಈ ತಾಲ್ಲೂಕಿನ ಜೀವನದಿಯಾಗಿರುವ ಹೇಮಾವತಿ ತಪ್ಪಲಲ್ಲಿರುವ ಹೇಮಾದ್ರಿಗಿರಿಯು ನೈಸರ್ಗಿಕ ಪ್ರಶಾಂತತೆಗೆ ಹೆಸರಾಗಿದೆ. ಇಲ್ಲಿನ ಆರಾಧ್ಯದೈವನಾದ ಶ್ರೀಕಲ್ಯಾಣವೆಂಕಟರಮಣಸ್ವಾಮಿ ಹಾಗೂ ಪದ್ಮಾವತಿ ದೇವತೆಯು ಭಕ್ತರ ಕಷ್ಟಕಾರ್ಪಣ್ಯಗಳನ್ನು ನೀಗುತ್ತಾ ಭೂಲೋಕದ ವೈಕುಂಠವೆನಿಸಿದೆ. ಭೌಗೋಳಿಕವಾಗಿ ಹೇಮಗಿರಿಯು ರತ್ನಗಿರಿಬೆಟ್ಟ, ಬೆಳ್ಳಿಬೆಟ್ಟ ಮೊದಲಾದ ಸಾಲು–ಸಾಲು ಬೆಟ್ಟಗುಡ್ಡ ಪ್ರದೇಶಗಳಲ್ಲಿ ಚಿನ್ನ, ಬೆಳ್ಳಿಯಂತಹ ಅದಿರುಗಳ ನಿಕ್ಷೇಪಗಳನ್ನು ಹೊಂದಿದ್ದು, ಹೇಮಾವತಿ ನದಿಯು ಸುಮನೋಹರ ರಮ್ಯತಾಣವಾಗಿದೆ ಮತ್ತು ವಿಶಿಷ್ಟವೆನಿಸಿದೆ.

ಕೃಷ್ಣರಾಜಪೇಟೆಯ ಪಶ್ಚಿಮಕ್ಕೆ (ನಾಲ್ಕುಮೈಲಿ) ಹಾಗೂ ಬಂಡಿಹೊಳೆ ಗ್ರಾಮದ ಪೂರ್ವಕ್ಕೆ (ಒಂದುಮೈಲಿ) ಇರುವ ಹಾದಿಯವರೆಗೆ ಚಾಚಿಕೊಂಡಿರುವ ಒಂದು ಸುಂದರ ಗಿರಿಯೇ ಹೇಮಗಿರಿ. ಇದಕ್ಕೆ ಹಿಂದೆ 'ಹೇಮಾದ್ರಿ' ಎಂಬ ಹೆಸರು ಸಹ ಇದ್ದು ಹೇಮಾವತಿ ನದಿಯ ಪಶ್ಚಿಮಾಭಿಮುಖ ಚೆಲುವಿನ ಹರಿವಿನ ಹಿನ್ನೆಲೆಯಲ್ಲಿ ಭವ್ಯವಾಗಿ ಮೈದೋರಿರುವ ಗಿರಿಯಾಗಿ 'ಹೇಮಗಿರಿ' ಎಂದೂ ಪ್ರಸಿದ್ಧಿಯಾಗಿದೆ.

ಭೂವೈಕುಂಠವೆಂದೇ ಪ್ರಖ್ಯಾತಿಯಾಗಿರುವ ಹೇಮಗಿರಿ ಕ್ಷೇತ್ರವೂ ಭವ್ಯವಾದ ಪರಿಸರವನ್ನೊಳಗೊಂಡ ತಾಣವಾಗಿದೆ. ಒಂದು ನೂರಾ ಅರವತ್ತು ಮೆಟ್ಟಿಲಿರುವ ಈ ಹೇಮಾದ್ರಿಗಿರಿಯನ್ನು ಅನಾಯಾಸವಾಗಿ ಏರಿನಿಂತು ಹೇಮಾವತಿ ನದಿ ಹರಿವಿನ ಇಕ್ಕೆಲದ ಸೌಂದರ್ಯವನ್ನು ಮನಸಾರೆ ಸವಿಯಬಹುದು. ಚಿಕ್ಕಮಗಳೂರಿನ ಮೂಡಿಗೆರೆ ಬಳಿಯ ಪಶ್ಚಿಮಘಟ್ಟಗಳ ಜಾವಳಿಯ ಬಲ್ಲಾಳರಾಯನದುರ್ಗದಲ್ಲಿ ಹುಟ್ಟಿ, ದಕ್ಷಿಣಾಭಿಮುಖವಾಗಿ ಸಾಗಿ ಬಂದು, ಕಿಕ್ಕೇರಿ ಹೋಬಳಿಯ ಗೂಡೇ ಹೊಸಹಳ್ಳಿಯ ಬಳಿಯಲ್ಲಿ ಮಂಡ್ಯಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕನ್ನು ಪ್ರವೇಶಿಸಿ, ಹೇಮಗಿರಿಯ ಬಳಿ ಪಶ್ಚಿಮಾಭಿಮುಖವಾಗಿ ಜುಳುಜುಳು ನಾದವನು ನಿನದಿಸುತ್ತಾ, ಒಂದು ಮಟ್ಟ ಏರಿಯಿಂದ ಧುಮುಕಿ ಕುಲುಕುಲು ನಗುತ್ತಾ ಬೆಟ್ಟದ ಮೇಲಿನ ಶ್ರೀಕಲ್ಯಾಣ ವೆಂಕಟರಮಣಸ್ವಾಮಿಯ ಮುಂದೆ ಗಂಭೀರವಾಗಿ ಹರಿದು ಪುನಃ ಬಂಡಿಹೊಳೆಯ

ಸಮೀಪ ದಕ್ಷಿಣಾಭಿಮುಖವಾಗಿ ದಕ್ಷಿಣದಿಂದ - ಪಶ್ಚಿಮಕ್ಕೆ, ಪಶ್ಚಿಮದಿಂದ - ದಕ್ಷಿಣಕ್ಕೆ ಚಕ್ರದಂತೆ ಹೇಮಾವತಿ ನದಿಯು ಹರಿಯುವುದರಿಂದ ದಿವ್ಯಕ್ಷೇತ್ರವಾಗಿ ಪರಿಣಮಿಸಿದೆ. ಇದು ಮುಂದೆ ಹರಿದು ಹೊಸಕೋಟೆಯ ತಿಪ್ಪೂರಿನ ಬಳಿ ಕಾವೇರಿನದಿಗೆ ಸಂಗಮವಾಗುವ ಹೇಮಾವತಿಯ ನೋಟ ನೋಡುಗರಿಗೆ ಅನುಪಮವಾದುದಾಗಿದೆ. ಇದಕ್ಕಿಂತಲೂ ಅನ್ಯದೃಶ್ಯವೆಂದರೆ ಹೇಮಾವತಿಯ ಸುತ್ತಲಿನ ಹಸಿರು ಪೈರು ಪಚ್ಚೆಯ ಹೊಲಗದ್ದೆ, ತೋಟಗಳು, ಮುಗಿಲೆತ್ತರದ ಮರಗಿಡಗಳು ಹಾಗೂ ಕಲಾವೈಭವದ ದೇವಾಲಯಗಳು, ಧನುರ್ಮಾಸ, ಮಾಘಮಾಸ ಬಂತೆಂದರೆ ಹೇಮಗಿರಿ ಸುಂದರ ಸೊಬಗಿನಸಿರಿಯಾಗಿ ಸ್ವರ್ಗಮಾರ್ಗದ ಒಂದು ಕೈಮರವಾಗಿ ಕಂಗೊಳಿಸುತ್ತದೆ.

ಬೆಟ್ಟದರಂಗನ ದೇವಸ್ಥಾನದ ಪಕ್ಕದಲ್ಲಿ ಚಿತ್ರ-ವಿಚಿತ್ರವಾಗಿ ಆಗಸದತ್ತ ನೀಳವಾಗಿ ಚಾಚಿಕೊಂಡಿರುವ ಕೋಡುಗಲ್ಲು. ಪೌರಾಣಿಕ ಪ್ರತಿಮೆಗಳಂತಿರುವ ಭೃಗುಮುನಿವಾಸ ಗುಹೆ, ಗಾಯಿತ್ರಿಶಿಲೆ, ೧೮೮೦ರಲ್ಲಿ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಕಟ್ಟಲ್ಪಟ್ಟಿರುವ ೪೧೫ ಮೀಟರ್ ಉದ್ದದ ಅಣೆಕಟ್ಟು, ಇಲ್ಲಿನ ಸುಮನೋಹರ ಕಿರುಜಲಪಾತ, ಗಂಧ, ಬೀಟೆ, ತೇಗ, ಹೊನ್ನೆ, ಮತ್ತಿ, ಹಲಸು ಮೊದಲಾದ ಅಮೂಲ್ಯ ಸಸ್ಯ ಸಂಪತ್ತನ್ನೊಳಗೊಂಡ ರಮ್ಯತಾಣವಾಗಿದೆ. ೩೧೦ ಎಕರೆಯಷ್ಟು ವಿಶಾಲವಾದ ಪಕ್ಷಿದಾಮಕ್ಕೆ ಆಕರವಾಗಿರುವ ಸುಂದರ ದ್ವೀಪ ಹಾಗೂ ಆದಿಚುಂಚನಗಿರಿ ಸುಕ್ಷೇತ್ರದ ಶಾಖಾ ಮಠದ ನೆಲೆಗಳು ಪ್ರವಾಸಿಗರನ್ನು ತನ್ನತ್ತ ಸೆಳೆದುಕೊಳ್ಳುತ್ತಲೇ ಅನುಪಮ ಪ್ರೇಕ್ಷಣೀಯ ಸ್ಥಳವೆನಿಸಿದೆ.

**ಚಾರಿತ್ರಿಕ ಮಹತ್ವ:** ಹೇಮಗಿರಿ ಕ್ಷೇತ್ರಕ್ಕೆ ಐತಿಹಾಸಿಕವಾದಂತಹ ಮಹತ್ವವೂ ಇದೆ. ನಾವು ಯಾವುದೇ ಒಂದು ಪ್ರದೇಶದ ಅಧ್ಯಯನಕ್ಕೆ ಹೊರಟಾಗ ಅಲ್ಲಿನ ಚಾರಿತ್ರಿಕ ಅಂಶಗಳು ಕುತೂಹಲಭರಿತವಾಗಿದ್ದು ಸಂಬಂಧಪಟ್ಟ ವಿಷಯದ ನೈಜ ಚಿತ್ರಣವನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತದೆ. ಅಂತೆಯೇ ಹೇಮಗಿರಿ ಶ್ರೀಕ್ಷೇತ್ರಕ್ಕೆ ಸಂಬಂಧಿಸಿದ ಚಾರಿತ್ರಿಕ ಅಂಶಗಳು ಕುತೂಹಲಭರಿತವಾಗಿದೆ.

ಹೇಮಗಿರಿಯು ಧಾಮಿಕ ಹಿನ್ನೆಲೆಯುಳ್ಳ ಕ್ಷೇತ್ರವಾಗಿದ್ದೂ ೧೭ ಮತ್ತು ೧೮ನೇ ಶತಮಾನದಲ್ಲಿ ಮೈಸೂರು ಸಂಸ್ಥಾನಕ್ಕೊಳಪಟ್ಟ ಪ್ರದೇಶವಾಗಿತ್ತು. ಅದಕ್ಕಿಂತಲೂ ಹಿಂದೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಿಜಯನಗರದ ಪ್ರಭುಗಳ ಆಳ್ವಿಕೆಗೊಳಪಟ್ಟಿದ್ದು ೧೫-೧೬ನೆಯ ಶತಮಾನದ ಭಕ್ತಿಪಂಥದ ಹರಿಕಾರರೆನಿಸಿರುವ ಶ್ರೀ ವ್ಯಾಸರಾಯರು ಇಲ್ಲಿ ದನಗಳ ಜಾತ್ರೆಯನ್ನು ಆರಂಭಿಸಿದರೆಂಬ ಐತಿಹ್ಯವಿದೆ.

ನಾರಾಯಣನು ತನ್ನ ಭಕ್ತರ ಉದ್ಧಾರಕ್ಕಾಗಿ ವಿವಿಧ ರೂಪಗಳಲ್ಲಿ, ನಾಮಗಳಲ್ಲಿ ಅವತರಿಸಿ ನೆಲೆಸಿದ್ದಾನೆ, ಅಂತಹ ಅವತಾರಗಳಲ್ಲಿ ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯ ಅವತಾರವೂ ಒಂದಾಗಿದ್ದು ಹೇಮಗಿರಿ ಕ್ಷೇತ್ರದಲ್ಲಿ ನೆಲೆಯೂರಿದ್ದಾನೆ. ೧೭೬೦ರ ಕಾಲದಲ್ಲಿ ಮೈಸೂರು ಸಂಸ್ಥಾನವನ್ನು ಕೈವಶಮಾಡಿಕೊಂಡಿದ್ದಂತಹ ಹೈದರಾಲಿಯು ಅ ಕಾಲದಲ್ಲಿ ಶ್ರೀರಂಗನಾಥಸ್ವಾಮಿಯ ಪರಮಭಕ್ತನಾಗಿದ್ದನು. ತನ್ನ ಸಾಮ್ರಾಜ್ಯದಲ್ಲಿ ರಂಗನಾಥನ ದೇವಾಲಯವನ್ನು ಹೊರತುಪಡಿಸಿ ಮತ್ಯಾವ ದೇವಸ್ಥಾನಗಳಿರ ಬಾರದೆಂದೂ ನಾಶಗೊಳಿಸುತ್ತಾ ಶ್ರೀರಂಗಪಟ್ಟಣದಿಂದ ಪಶ್ಚಿಮ ದಿಕ್ಕಿಗೆ ಹೊರಟು ಅತ್ತಿಗುಪ್ಪೆಯ ಬಳಿಯಿದ್ದಂತಹ ಹರಿಹರಪುರ, ಅಕ್ಕಿಹೆಬ್ಬಾಳು, ಮೊದಲಾದವುಗಳಲ್ಲಿನ ದೇವಸ್ಥಾನಗಳನ್ನು ನಾಶಗೊಳಿಸಿ ಹೇಮಗಿರಿ ಕ್ಷೇತ್ರಕ್ಕೆ ಬಂದನು. ಅಲ್ಲಿನ ಬೆಟ್ಟದಲ್ಲಿರುವ ದೇವರು ಯಾವುದೆಂದೂ ಕೇಳಲಾಗಿ ಅದು ರಂಗನಾಥ ದೇವರು ವೆಂಕಟರಮಣಸ್ವಾಮಿ ಯೆಂದು ಕರೆಯಲ್ಪಡುತ್ತಿದು ಕಲ್ಯಾಣ ರಂಗನಾಥನಾಗಿ ನಿಂತಿಹನೆಂದೂ ಚಾಣಾಕ್ಷ ಕುಶಲ ಮತಿಗಳಾಗಿ ಅಲ್ಲಿನ ಪ್ರಜೆಗಳು ನುಡಿದು ಹೇಮಗಿರಿಯ ಸಮಸ್ತ ಆಸ್ತಿಯನ್ನು ಸಂರಕ್ಷಿಕೊಂಡರೆಂದು ತಿಳಿದುಬರುತ್ತದೆ.

ಹೇಮಗಿರಿಯ ದಕ್ಷಿಣ ಭಾಗದಲ್ಲಿ ಹೊಸಪಟ್ಟಣವೆಂಬ ಕೋಟೆಯಿರುವುದು. ಪುರಾತನ ಕಾಲದಲ್ಲಿ ಅಲ್ಲಿ ಎರಡು ಕೊಳಗಳಿದ್ದಾಗ್ಯೂ ಅವುಗಳ ಸಮೀಪದಲ್ಲಿ ಋಷಿಯೊಬ್ಬರು ತಪಸ್ಸು ಮಾಡುತ್ತಿದ್ದರಂತೆ, ಈಗಲೂ ಒಂದು ಕೊಳವಿದ್ದು ಮತ್ತೊಂದು ಹೂತುಹೋಗಿದೆ. ಈ ಹೊಸಪಟ್ಟಣವೆಂಬುದು ಹೇಮಗಿರಿಯಿಂದ ಸುಮಾರು ನಾಲ್ಕೈದು ಕಿಲೋಮೀಟರ್ ದೂರದಲ್ಲಿದ್ದು ದ್ವೀಪದಂತಿದೆ, ಸುತ್ತಲೂ ಹೇಮಾವತಿ ನದಿಯು ಹರಿಯುವುದು. ಈ ಭೂಭಾಗ ಸರಿಸುಮಾರು ನೂರೈವತ್ತು ಎಕರೆಯುಳ್ಳ ಪ್ರದೇಶ–ವಾಗಿದೆ. ಇದು ಟಿಪ್ಪುವಿನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿರುವಂತಹ ಕೋಟೆಯಂತೆ ಇಲ್ಲಿಯೂ ಕಟ್ಟಲಾಗಿದೆಯೆಂಬುದಾಗಿ ಸ್ಥಳೀಯ ಹಿರಿಯ ತಲೆಗಳಿಂದ ತಿಳಿದು ಬಂದ ಸಂಗತಿಯಾಗಿದೆ. ಮೊದಲು ಹಿರಿಯ ನವಾಬರಾಗಿದ್ದಂತಹ ಹೈದರಾಲಿಯು ಈ ಸ್ಥಳವೀಕ್ಷಣೆ ಮಾಡಿ ಅರಮನೆ ಕಟ್ಟಲು ಪಾಯ ಮೆಟ್ಟಿ ನೆಲಕ್ಕೆಲ್ಲಾ ಗಾರೇಗಚ್ಚು ಹಾಕಿಸಿದರಂತೆ, ಕೋಟೆ ಕೆಲಸವು ಅರ್ಧವಾಗಿರುವಾಗ ಹೈದರಾಲಿಯು ಯುದ್ಧದಲ್ಲಿ ಪಾಲ್ಗೊಂಡಿರುವಾಗಲೇ ಹತರಾದರಂತೆ. ಅದಾದ ಬಳಿಕ ಟಿಪ್ಪು ಕೋಟೆಯ ಉಳಿದ ಕೆಲಸವನ್ನೆಲ್ಲಾ ಪೂರ್ಣಗೊಳಿಸಿದನಂತೆ. ಒಂದು ದಿನ ಟಿಪ್ಪು ಕೋಟೆಯ ಕೆಲಸ ಪೂರ್ಣಗೊಂಡಿರುವುದರಿಂದ ಕೋಟೆಯ ಮೇಲೆ ಸುತ್ತಿಕೊಂಡು ಬರುವಾಗ ದೂರದಲ್ಲಿ

ಪೂರ್ವದ ಕೋಟೆ ಬಾಗಿಲಿಗೆ ಎದುರಾಗಿರುವ ಬೆಳ್ಳಿಬೆಟ್ಟವನ್ನು ನೋಡಿದನು, ಆಗ ಅವನ ಮನಸ್ಸಿಗೆ ತಟ್ಟನೆ ಏನೋ ಹೊಳೆದು ಎರಡು ಜವಣೆಯನ್ನು ತರಿಸಿ ಎರಡರ ತುದಿಗೂ ಹುಂಜಗಳನ್ನು ಕಟ್ಟಿ ಕೋಟೆಯ ಬಾಗಿಲ ಮೇಲೊಂದನ್ನು ನೆಡಿಸಿದನಂತೆ, ಇನ್ನೊಂದನ್ನು ಬೆಳ್ಳಿಯ ಬೆಟ್ಟದ ಮೇಲೆ ನೆಡಿಸಿ ಕೋಟೆಯ ಮೇಲಿಂದ ಗುರಿಕಟ್ಟಿ ಗುಂಡುಹೊಡೆಯಲು ಜವಣೆಯು ಹಾರಿಹೋಯಿತು. ಬೆಳ್ಳಿಯ ಬೆಟ್ಟದ ಮೇಲಿಂದ ಗುಂಡು ಹೊಡೆಯಲು ಕೋಟೆಯ ಮೇಲಿದ್ದ ಜವಣೆಯು ಹುಂಜನ ಸಹಿತ ಹಾರಿಹೋಯಿತು. ಆಗ ಟಿಪ್ಪು ಯೋಚನಾ ಮಗ್ನನಾಗಿ ತನ್ನ ನಾಶಕ್ಕೆ ಇದು ಸುಲಭದ ದಾರಿಯಾಗುವುದೆಂದೂ ಅರಿತು ಸದ್ಯಕ್ಕೆ ಕೋಟೆಯ ಕೆಲಸ ನಿಂತಿರಲಿ ದೇವರ ಕೃಪೆಯಿಂದ ಬ್ರಿಟಿಷರು ಭಾರತದಿಂದ ಪಲಾಯನ ಮಾಡಿದರೆ ಈ ಪ್ರಾಂತ್ಯವನ್ನು ಅಭಿವೃದ್ಧಿಪಡಿಸೋಣವೆಂದೂ ನುಡಿದು ಹೊರಟುಹೋದನಂತೆ.

ಕಾಲಾಂತರದಲ್ಲಿ ಈ ಭೂಪ್ರದೇಶದಲ್ಲಿ ಮರ, ಗಿಡಬಳ್ಳಿಗಳು ದಟ್ಟವಾಗಿ ಬೆಳೆದು ನಿಂತುಬಿಟ್ಟಿತು. ಅಂತೂ ೧೯೩೧ನೇ ಇಸವಿಯಲ್ಲಿ ಈ ಕೋಟೆಗೆ ಸಮೀಪವಾಗಿ ಅಂದರೆ ಇಂದಿನ ಹರಿಹರಪುರ ಮತ್ತು ಅಕ್ಕಿಹೆಬ್ಬಾಳು ಗ್ರಾಮಗಳನ್ನು ಒಗ್ಗೂಡಿಸುವ ಸೇತುವೆಯೊಂದನ್ನು ನಿರ್ಮಿಸುವ ಕಾರ್ಯವೂ ಬಂದೊದಗಲು ಅದಕ್ಕೆ ಕೋಟೆಯ ಕಲ್ಲೆಲ್ಲವನ್ನು ಸಾಗಿಸಿಬಿಟ್ಟರಂತೆ, ಈಗಲೂ ಬರೀ ಮಣ್ಣಿನ ಗೋಡೆಗಳು ಹೊಸ-ಪಟ್ಟಣದಲ್ಲಿದ್ದು ವಿಷಕಾರ ಪ್ರಾಣಿ-ಜಂತುಗಳು ಹೇರಳವಾಗಿರುವುದರಿಂದ ಯಾರೂ ಹೋಗದೆ ಪಾಳಾಗಿಯೇ ಬಿದ್ದಿದೆ. ದೂರದಿಂದ ಹೊಸಪಟ್ಟಣದ ವೀಕ್ಷಣೆಯನ್ನು ಇಂದಿಗೂ ಮಾಡಬಹುದಾಗಿದೆ.

ಕ್ರಿಸ್ತಶಕ ೧೯೫೩ರಲ್ಲಿ ಜಯಚಾಮರಾಜೇಂದ್ರ ಒಡೆಯರ್‌ರವರು ಹೇಮಗಿರಿ ಕ್ಷೇತ್ರಕ್ಕೆ ಭೇಟಿಮಾಡಿದ್ದು ಆಗ ಕೆ.ಆರ್. ಪೇಟೆಯಿಂದ ನೇರವಾಗಿ ಹೇಮಗಿರಿಗೆ ದಾರಿಯಿರಲಿಲ್ಲ, ಕಿಕ್ಕೇರಿಯ ಮಾರ್ಗದಲ್ಲಿನ ಕೃಷ್ಣಾಪುರ ಗ್ರಾಮದಿಂದ ಮಾಕವಳ್ಳಿ ಕುಪ್ಪಹಳ್ಳಿ ಮಾರ್ಗವಾಗಿ ಬರಬೇಕಾಗಿತ್ತು ಇಲ್ಲವೇ ಹರಿಹರಪುರದಿಂದ ಬಂಡಿಹೊಳೆ ಮಾರ್ಗವಾಗಿ ಬರಬೇಕಾಗಿತ್ತು. ಇದನ್ನು ಗಮನಿಸಿದಂತಹ ಒಡೆಯರ್‌ರವರು ಕೆ.ಆರ್.ಪೇಟೆಯಿಂದ ನೇರವಾಗಿ ವಾಹನಗಳ ಸಂಚಾರವಾಗುವಂತಹ ರಸ್ತೆಯನ್ನು ಸಾಧುಗೋನಹಳ್ಳಿ ಮಾರ್ಗವಾಗಿ ಹೇಮಗಿರಿ, ಬಂಡಿಹೊಳೆಯವರೆಗೂ ಸುಮಾರು ೧೨ ಕಿಲೋಮೀಟರ್ ದೂರದವರೆಗಿನ ರಸ್ತೆಯನ್ನು ಮಾಡಲು ಆದೇಶ ಮಾಡಿದರು.

ಕಾಲಕ್ರಮೇಣ ಅದು ಉತ್ತಮ ರಸ್ತೆಯಾಗಿ ಮಾರ್ಪಟ್ಟಿತು. ಇದಕ್ಕೆ ಸಂಬಂಧಿಸಿದ ಶಾಸನವು ಹೇಮಗಿರಿಯಿಂದ ಬಂಡಿಹೊಳೆಗೆ ಹೋಗುವ ಮಾರ್ಗದ ಹಾದಿಯಲ್ಲೇ ಕೆತ್ತಿಸಲಾಗಿದೆ.

ಹೇಮಗಿರಿಯಲ್ಲಿ ವೈಭವೋಪೇತವಾದ ಕಟ್ಟಡಗಳ ಸಾಲುಗಳಿಲ್ಲ ಇಲ್ಲಿಗೆ ಆಗಮಿಸಿದ ಮೈಸೂರಿನ ದಿವಾನರು ಬಂದು ಇಲ್ಲಿಯ ಸೊಬಗನ್ನು ನೋಡಿ "ನಾವೇನಾದರೂ ಇಲ್ಲಿ ಕಟ್ಟಡ ಮುಂತಾದ ಕೆಲಸಗಳಿಗೆ ಕೈಹಾಕಿದರೆ ಪ್ರಕೃತಿ ಸೌಂದರ್ಯದ ಕೊಲೆ ಮಾಡಿದಂತೆಯೇ ಸರಿ" ಎಂದು ನುಡಿದಿದ್ದರಂತೆ.

ಸುಮಾರು ಐದು ದಶಕಗಳ ಹಿಂದೆ ನಡೆದಂತಹ ಸತ್ಯಘಟನೆಯ ವಿವರ-ವೊಂದು ಹೀಗಿದೆ. ಮಹಾರಾಷ್ಟ್ರದ ಮುಂಬೈಯ ಸಮೀಪದ ಊರಿನವನೊಬ್ಬ ಹುಟ್ಟು ಕುರುಡನಾಗಿದ್ದು, ಮದುವೆಯನಂತರದಲ್ಲಿ ಸಾಕಷ್ಟು ಕಷ್ಟಗಳನ್ನು ಅನುಭವಿಸಿ ಅನಂತರದಲ್ಲಿ ಮಡದಿಯೊಡಗೂಡಿ ಹೇಮಗಿರಿ ಕ್ಷೇತ್ರಕ್ಕೆ ಆಕಸ್ಮಿಕವಾಗಿ ಯಾರದೋ ನೆರವಿನಿಂದ ಬಂದು ಮೂರ್ನಾಲ್ಕು ವರ್ಷಗಳವರೆಗೆ ನೆಲೆಸಿ ಪ್ರತಿನಿತ್ಯವು ವೆಂಕಟರಮಣಸ್ವಾಮಿಯ ಸೇವೆಯನ್ನು ಮಾಡುತ್ತಾ ದಂಪತಿಗಳು ಕಾಲಕಳೆಯುತ್ತಿರಲೂ ನಿಷ್ಕಲ್ಮಶ ಮನಸ್ಸಿನಿಂದ ವೆಂಕಟರಮಣಸ್ವಾಮಿ ಮತ್ತು ಲಕ್ಷ್ಮಿಯ ಅವತಾರವೊಂದಾದ ಪದ್ಮಾವತಿಯ ಸೇವೆಯನ್ನು ಮಾಡಲಾಗಿ ಆ ಹುಟ್ಟುಕುರುಡನಿಗೆ ದೃಷ್ಟಿಯು ಬರುವುದರ ಜೊತೆಗೆ ಪದ್ಮಾವತಿಯ ದೃಷ್ಟಿಯಿಂದ ಹೇಮವೂ ದೊರೆತು ಈತನು ಮತ್ತೆ ಮುಂಬೈಗೆ ತೆರಳಿ ಪ್ರಸಿದ್ಧ ವಾಣಿಜ್ಯೋದ್ಯಮಿಯಾಗಿರುವನೆಂದು ಪ್ರತಿವರ್ಷ ಹೇಮಗಿರಿ ಕ್ಷೇತ್ರಕ್ಕೆ ಬಂದು ಶ್ರೀ ಕಲ್ಯಾಣರಮಣಸ್ವಾಮಿಗೆ ವಿಶೇಷ ಪೂಜೆಯನ್ನು, ಹೋಮವನ್ನು ನಡೆಸಿ ಭಕ್ತಜನರಿಗೆಲ್ಲಾ ಅನ್ನಸಂತರ್ಪಣೆ ಮಾಡುತ್ತಿದ್ದುದನ್ನು ತಿಳಿಸಿದರು.

ಹೇಮಗಿರಿಯ ಕ್ಷೇತ್ರವೂ ಕೇವಲ ಸತ್ಕಾರ್ಯಗಳನ್ನು ನೆರವೇರಿಸಲು ಇರು-ವಂತಹ ಸ್ಥಳವಾಗಿದೆ. ಇಲ್ಲಿ ಯಾವುದೇ ಅನಾಚಾರಗಳನ್ನು ಎಸಗಬಾರದು ಹಾಗೇನಾದರೂ ಒಂದು ವೇಳೆ ಎಸಗಿದರೆ ಅವರ ಉಳಿವಿಗೆ ಕಾಲವಿಲ್ಲ. ಇದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕಿನ ನಿವೃತ್ತ ಶಿಕ್ಷಕರೊಬ್ಬರು ಎರಡು ದಶಕಗಳ ಹಿಂದೆ ಈ ತಪೋಕ್ಷೇತ್ರಕ್ಕೆ ಬಂದು ಅನಾಥಶ್ರಮವೊಂದನ್ನು ನಿರ್ಮಿಸುವ ಇಂಗಿತವನ್ನು ವ್ಯಕ್ತಪಡಿಸಿ, ಭೃಗುಮುನಿ ಮಹರ್ಷಿಗಳು ವಾಸವಾಗಿದ್ದ ಗುಹೆಯಲ್ಲಿಯೇ ಇವರು ವಾಸಮಾಡಿಕೊಂಡು ಈ

ಗುಹೆಯ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡರು. ಅಲ್ಲದೆ ಪ್ರತಿ ಅಮಾವಾಸ್ಯೆ ಮತ್ತು ಹುಣ್ಣಿಮೆಯ ದಿವಸಗಳಲ್ಲಿ ಇವರು ಈ ಗುಹೆಯಲ್ಲಿ ಬಂದು ತಪಸ್ಸು ಕೈಗೊಳ್ಳುತ್ತಿದ್ದರು. ಈ ಕೃತಿಯ ಕರ್ತೃವಾದ ನಾನು ೧೯೭೪-೭೫ನೇ ಸಾಲಿನಲ್ಲಿ ಎಂಟನೆ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಅಂದೂ ಅಮಾವಾಸ್ಯೆಯ ದಿನದಂದು ಈ ವ್ಯಕ್ತಿಯು ಗುಹೆಯಲ್ಲಿ ಕುಳಿತು ಏನು ಮಾಡುತ್ತಿರುವರೆಂದು ನೋಡುವ ಕುತೂಹಲದಿಂದ ಸ್ನೇಹಿತನೊಬ್ಬನ (ಮರೀಗೌಡ ಆನೇ ಎ ವಿಭಾಗ ೧೯೭೪-೭೫-ನೇ ಸಾಲು) ಜೊತೆಗೂಡಿ ಆ ಗುಹೆಗೆ ಸರಿಸುಮಾರು ೧೨:೩೦ರ ಸಮಯದಲ್ಲಿ ನೋಡಲು ಹೋಗಿ ಆತ ಬೆತ್ತಲೆಯಾಗಿ ಯೋಗಮುದ್ರೆಯಲ್ಲಿ ಕಣ್ಮುಚ್ಚಿ ಕುಳಿತಿದ್ದು ನಮ್ಮ ಸದ್ದು ಕೇಳಿ ನೇತ್ರಗಳನ್ನು ಬಿಟ್ಟು ನಮಗೆ ಇಲ್ಲಿ ಬರಬಾರದೆಂದೂ ಎಚ್ಚರಿಸಿದರು. ಈ ಅನುಭವವನ್ನು ನಾವೂ ಯಾರ ಬಳಿಯೂ ಭಯದಿಂದ ತಿಳಿಸಿರಲಿಲ್ಲ. ಈಗ ಕೃತಿಯ ರಚನೆಯಲ್ಲಿ ತೊಡಗಿದಾಗ ಸ್ಥಳವೀಕ್ಷಣೆ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃವಿವರ:೪ ಇವರ ಬಳಿ ಪ್ರಸ್ತಾಪಿಸಲಾಗಿ ಅವರು ವಾಮಚಾರವನ್ನು ಮಾಡಲು ಬಂದು ಈ ಸ್ಥಳದಲ್ಲಿ ಅನೈತಿಕ ಚಟುವಟಿಕೆಗಳನ್ನು ಕೈಗೊಂಡರು. ಶ್ರೀಕ್ಷೇತ್ರವೂ ಕಲ್ಯಾಣಕಾರ್ಯಕ್ಕೆ ಸೀಮಿತವೇ ಹೊರತು ದುರ್ಮಾರ್ಗಕ್ಕಲ್ಲ ಹಾಗಾಗಿ ಅವರ ಅಂತ್ಯವೂ ತುಂಬಾ ವಿಕೃತವಾಗಿ ಹೋಯಿತೆಂದೂ ತಿಳಿಸಿದರು. ಹಾಗಾಗಿ ಈ ದಿವ್ಯ ಕ್ಷೇತ್ರವೂ ಸತ್ಕಾರ್ಯದ ಕೇಂದ್ರವಾಗಿದೆ ಹೊರತು ಕೆಟ್ಟದ್ದು ಮಾಡಲು ಮುಂದಾದವರಿಗೆ ಈಗಾಗಲೇ ತಿಳಿಸಿರುವಂತೆ ಎಂತಹ ನಿಷ್ಫಲವುಂಟಾಗುತ್ತದೆಂಬುದನ್ನು ಮನಗಾಣಬಹುದಾಗಿದೆ.

ಹೊಸಪಟ್ಟಣದಲ್ಲಿ ಕೋಟೆಯ ಕಾರ್ಯವೂ ನಡೆದಂತಹ ಸಂದರ್ಭದಲ್ಲಿ ಈ ಹೇಮಗಿರಿಯ ಬೆಟ್ಟದಿಂದ ಹಿಡಿದು ಶ್ರೀರಂಗಪಟ್ಟಣದವರೆವಿಗೂ ಸುರಂಗಮಾರ್ಗ ವೊಂದನ್ನು ನಿರ್ಮಾಣಮಾಡಲಾಯಿತೆಂಬ ಐತಿಹ್ಯವೂ ಕೂಡ ಇರುವುದು. ಭೃಗುಮುನಿಯ ಗುಹೆಯ ಜೀರ್ಣೋದ್ಧಾರ ಮಾಡುವ ಮೊದಲು ಈ ಗುಹೆಯಿಂದ ಸುರಂಗಮಾರ್ಗವಿದ್ದ ಪ್ರಸಂಗಗಳು ಜನರಲ್ಲಿ ಸುಳಿದಾಡುತ್ತಿದ್ದವು ಸುಮಾರು ದಶಕಗಳ ಹಿಂದೆ ಒಂದು ಹಸು, ಕರು ಮತ್ತು ಬಾಲಕನೊಬ್ಬ ಈ ಗುಹೆಯೊಳಗೆ ತೆರಳಿ ಹಿಂದುರುಗಿ ಬರಲೇ ಇಲ್ಲವೆಂಬ ಸಂಗತಿ ತಿಳಿದುಬಂತು. (ವಕ್ತೃ-೪ ನೀಡಿದ ಮಾಹಿತಿ) ಕುಪ್ಪಹಳ್ಳಿ ಗ್ರಾಮದ ಹಾಲಿ ಛೇರ್ಮನ್‌ರಾಗಿದ್ದ ತಿಮ್ಮೇಗೌಡರೆಂಬುವರ ತಂದೆಯಾದ ಪಾಪೇಗೌಡರೆಂಬುವರು ಬಲು ಕಟ್ಟುಮಸ್ತಿನ ವ್ಯಕ್ತಿಯಾಗಿದ್ದು ತುಂಬಾ ಶಕ್ತಿದಾಯಕರಾಗಿದ್ದರು. ಇವರ ಬಳಿ ತಮಾಷೆಗಾಗಿ ನೀನೂ ನಿಜವಾದ ಶಕ್ತಿಪುರುಷ-

ನಾಗಿದ್ದರೆ ಆ ಹೇಮಗಿರಿಯ ಬೆಟ್ಟದಲ್ಲಿನ ಗುಹೆಯೊಗಳೆ ಹೋಗಿ ಬಾ ಎಂದರು. ಆಗ ಪಾಪೇಗೌಡರು ಗುಹೆಯೊಳಗೆ ಹೋಗಿ ಸುಮಾರು ೧೦೦ ಮೀಟರ್ ದೂರ ಕ್ರಮಿಸಿದಾಗ ಅಲ್ಲಿ ಮುಂದೆ ತೆರಳಲು ಸಾಧ್ಯವಾಗದಂತೆ ಬಂಡೆಯೊಂದು ಅಡ್ಡವಾಗಿತ್ತಂತೆ ಅಲ್ಲಿ ವಿಷಕಾರಿ ಹಾವುಗಳು ಸುಳಿದಾಡುತ್ತಿದ್ದು, ಕಿರುಬವೊಂದು ಇವರ ಮೇಲೆ ಎರಗಿ ಬಂದಾಗ ಧೈರ್ಯದಿಂದ ಅದರೊಡನೆ ಹೋರಾಡಿ ಸಾಯಿಸಿ ಹಿಂತಿರುಗಿ ಬಂದ ಪ್ರಸಂಗ ಕಣ್ಣಿಗೆ ಕಟ್ಟುವಂತೆ ತಿಳಿಸಿದರ. ಈಗ ಅದೇನೇ ಆಗಿರಲಿ ಸದ್ಯಕ್ಕೆ ಈ ಸುರಂಗಮಾರ್ಗ ಮುಚ್ಚಲಾಗಿದೆ. ಈ ಮಾರ್ಗದಲ್ಲಿ ಸಾಗಿದರೆ ಚಿನ್ನದ ನಿಕ್ಷೇಪವೂ ದೊರೆಯುವುದೆಂಬ ಮಾಹಿತಿ ಸಹ ಲಭಿಸಿದ್ದು ಅದು ಕರಾರುವಕ್ಕಾಗಿರುವುದಿಲ್ಲ. ಆದರೆ ೧೯೭೩ರ ಕಾಲದಲ್ಲಿ ಇಂದಿರಾಗಾಂಧಿಯು ಪ್ರಧಾನಿಯಾಗಿದ್ದಾಗ ಕೇಂದ್ರದ ಆಯೋಗದ ತಂಡವೊಂದು ಹೇಮಗಿರಿಗೆ ಬಂದು ಚಿನ್ನ –ಬೆಳ್ಳಿಯ ನಿಕ್ಷೇಪಗಳಿರುವುದನ್ನು ಪತ್ತೆ ಹಚ್ಚಿ ಗಣಿಗಾರಿಕೆ ನಡೆಸಲು ಸಾಧ್ಯವಾಗದ ವಾತಾವರಣ ಉಂಟಾಯಿತೆಂಬುದು ಸತ್ಯವಾಗಿದೆ. ಒಟ್ಟಿನಲ್ಲಿ ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯು ಇಲ್ಲಿ ನೆಲೆನಿಂತಿರುವವರೆಗೂ ಯಾವುದೇ ಪ್ರಕೃತಿ ವಿಕೋಪದಂತಹ ಕಾರ್ಯಗಳನ್ನಾಗಲೀ ಪ್ರಕೃತಿ ಸೌಂದರ್ಯಕ್ಕೆ ಧಕ್ಕೆ ತರುವಂತಹ ಕಾರ್ಯಗಳನ್ನಾಗಲೀ ಕೈಗೊಳ್ಳಲಾಗುವುದಿಲ್ಲ ಎಂಬುದು ಸತ್ಯತೆಯನ್ನೊಳಗೊಂಡ ಸಂಗತಿಗಳಾಗಿವೆ.

# ಅಧ್ಯಾಯ – ೪
# ಪೌರಾಣಿಕ ಹಿನ್ನೆಲೆಯಲ್ಲಿ ಹೇಮಗಿರಿ

ಧಾರ್ಮಿಕ, ಸಾಂಸ್ಕೃತಿಕ, ಪ್ರಾಕೃತಿಕ ಹಿರಿಮೆಯನ್ನು ಹೊತ್ತ ಹೇಮಗಿರಿ ಕ್ಷೇತ್ರವು ಪುರಾಣಗಳಲ್ಲಿ ಸಾಕಷ್ಟು ಉಲ್ಲೇಖಗೊಂಡಿರುವ ಸಂಗತಿ ದೊರಕುವುದು. ಭಾರತದ ಉತ್ತರ ಭಾಗದಲ್ಲಿನ ಹಿಮಾಲಯ ಪರ್ವತ ಶ್ರೇಣಿಗಳು ಪುರಾತನಕಾಲದಿಂದಲೂ ಋಷಿಮುನಿಗಳಿಗೆ ತಪಸ್ಸಿನ ತಾಣವಾಗಿದೆ. ಮಹಾಭಾರತದ ಹಲವಾರು ಸನ್ನಿವೇಶಗಳು ಸಹ ಈ ಹಿಮಾಲಯದಲ್ಲಿ ಕಂಡುಬರುತ್ತದೆ. ಸುಮಾರು ಐದುಸಾವಿರ ವರ್ಷಗಳ ಹಿಂದೆ ಉತ್ತರಭಾರತದಲ್ಲಿದ್ದಂತಹ ಋಷಿಗಳು ಸಂಸಾರಿಚೇತನರನ್ನು ಅನುಗ್ರಹಿಸುವುದಕ್ಕಾಗಿ ದಕ್ಷಿಣ ಭಾರತದಾದ್ಯಂತ ಸಂಚರಿಸಲು ನಿಶ್ಚಯಿಸಿಕೊಂಡು ಗೌತಮ ಮಹರ್ಷಿಗಳು ಮತ್ತು ಭೃಗುಮುನಿ ಮಹರ್ಷಿಗಳು ಹೊರಟು ಬಂದರು. ಗೌತಮ ಮತ್ತು ಭೃಗು ಮಹರ್ಷಿಗಳು ತಪಸ್ಸಿಗೆ ಯೋಗ್ಯವಾದ ಪ್ರದೇಶವನ್ನು ಹುಡುಕುತ್ತಾ ದಂಡಕಾರಣ್ಯದ ದಕ್ಷಿಣಭಾಗದಲ್ಲಿನ ಕಾವೇರಿ ನದಿಯನ್ನು ನೋಡಿ ಇದೆ ತಪಸ್ಸಿಗೆ ಯೋಗ್ಯವಾದ ಸ್ಥಳವೆಂದು ನಿಶ್ಚಯಿಸಿ ಗೌತಮ ಮಹರ್ಷಿಗಳು ಅಲ್ಲೇ ನೆಲೆ ನಿಂತರು. ಈಗಲೂ ಶ್ರೀರಂಗಪಟ್ಟಣದ ದಕ್ಷಿಣದಿಕ್ಕಿನ ಕಾವೇರಿ ನದಿಯ ದಡವು ಗೌತಮ ಕ್ಷೇತ್ರವೆಂದು ಪ್ರಸಿದ್ಧಿಯಾಗಿದೆ.

ಭೃಗುಮಹರ್ಷಿಗಳು ಸ್ವಲ್ಪ ಉತ್ತರಕ್ಕೆ ಸಂಚರಿಸುತ್ತಾ ಬಂದು ಪಶ್ಚಿಮವಾಹಿನಿ-ಯಾಗಿ ಹರಿಯುವ ಕಾವೇರಿಯ ಉಪನದಿಯಾದ ಹೇಮಾವತಿಯನ್ನೂ ಸಮೀಪದಲ್ಲೇ ಕೋಡುಗಲ್ಲುಗಳಿಂದಲೂ, ತಪ್ಪಲು ಪ್ರದೇಶಗಳಿಂದಲೂ ಅತಿರಮ್ಯವಾದಂತಹ ಪ್ರದೇಶವನ್ನು ಕಂಡು ಸಂತುಷ್ಟರಾಗಿ ಇಲ್ಲೇ ನೆಲೆನಿಂತು ಅನೇಕ ವರ್ಷಗಳ ಕಾಲದವರೆಗೆ ತಪಸ್ಸನ್ನಾಚರಿಸಿದರು. ಇವರ ತಪಸ್ಸಾಚರಣೆಗೆ ಕಾರಣವೊಂದು ಇತ್ತು. ಅದೇನೆಂದರೆ: ಪಶ್ಚಿಮಾಭಿಮುಖವಾಗಿ ಪ್ರವಹಿಸುವ ನದಿಯ ನೋಟ, ಓ ಪರ್ವತವು ಅಷ್ಟು ಎತ್ತರವೂ ಅತಿ ನೀಚವೂ ಇಲ್ಲದೆ ಬಹುಸುಂದರವಾಗಿ ಕಾಣುವ ರಮಣೀಯವಾದ ಸಾದೃಶ್ಯವೂ ಮನದಲ್ಲೊಂದು ಯೋಚನೆಮೂಡುವಂತೆ ಮಾಡಿತು. ಆ ಪ್ರದೇಶದ ಸೌಂದರ್ಯಕ್ಕೆ ಮುಗ್ಧರಾದ ಮಹರ್ಷಿಗಳು ಕರುಣಾಸಮುದ್ರನು, ಪ್ರಪಂಚದ ಸೃಷ್ಟಿ ಸ್ಥಿತಿಲಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವ ಭಕ್ತರಲ್ಲಿ ದಯೆಗೈಯುವ ಸರ್ವೇಶ್ವರನಾದಂತಹ ನಾರಾಯಣನ ಸಾನ್ನಿಧ್ಯವು ಇಲ್ಲಿ ಇಲ್ಲದಿದ್ದರೆ ಏನೂ ಪ್ರಯೋಜನ ಹಾಗಾಗಿ ಸಾನ್ನಿಧ್ಯವು

ಉಂಟಾದರೆ ಈ ದೇಶದ ಸೌಭಾಗ್ಯವು ಸಫಲವಾಗುವುದು ಎಂದೂ ಆಲೋಚಿಸಿ ತಪಸ್ಸಿಗೆ ಸಿದ್ಧರಾಗಿ ಸ್ನಾನಾದಿಕಾರ್ಯದಿಂದ ಜಪ-ತಪಗಳಲ್ಲಿ ದಾನದಲ್ಲಿ ತೊಡಗಿ ಪರಮಪುರುಷನಾದ ವಾಸುದೇವನನ್ನು ಉಪಾಸನ ಮಾಡಿದರು, ಮಾಘ ಶುದ್ಧ ಸಪ್ತಮಿಯ ದಿವಸದಂದು ನಾರಾಯಣನು ಇಂದಿನ ಹೇಮಗಿರಿ ಬೆಟ್ಟದಲ್ಲಿನ ಕಲ್ಯಾಣವೆಂಕಟರಮಣಸ್ವಾಮಿಯ ಅವತಾರದಲ್ಲಿ ದರ್ಶನ ನೀಡಿದನೆಂದೂ ವರವನ್ನು ಕೇಳಿಕೊಳ್ಳುವಂತೆ ಭಗವಂತನು ಆಜ್ಞಾಪಿಸಲು ಭೃಗುಮಹರ್ಷಿಗಳು ಸರ್ವೇಶ್ವರನನ್ನು ಸರ್ವಕಾರಣಗಳಿಗೂ ಕಾರಣೀಭೂತನಾದ ಜಗದೊಡೆಯನಾದ ಎಲೈ ದೇವ ದೇವನೇ ಕರುಣಾಸಾಗರನೇ ಈ ಹೇಮಾವತಿ ನದಿಯ ತೀರದಲ್ಲಿ ಮನಮೋಹಕವಾಗಿರುವ ಈ ಸ್ಥಳದಲ್ಲಿ ಲಕ್ಷ್ಮೀದೇವಿಯೊಂದಿಗೆ ಸಾನ್ನಿಧ್ಯವನ್ನು ವಹಿಸಿ ಭಜಿಸುವ ಭಕ್ತರುಗಳಿಗೆ ಅನುಗ್ರಹವನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡರು ಹಾಗೂ ಸ್ವಾಮಿಯೇ ನಿನ್ನ ಸಾನ್ನಿಧ್ಯದಿಂದ ಈ ಪ್ರದೇಶದ ಸೌಂದರ್ಯವೂ ಇನ್ನೂ ಅಧಿಕವಾಗಿ ಅಲಂಕರಿಸಿರುವಂತೆ ಪ್ರಕಾಶಿಸಲಿ ಎಂದೂ ಪ್ರಾರ್ಥಿಸಿಕೊಂಡಾಗ ಭಗವಂತನು ಎಲೈ ಭೃಗುಮುನಿಯೇ ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆನೆಂದುಕೊಂಡು ಬೆಟ್ಟದ ರಂಗನಾಗಿ- ಲಕ್ಷ್ಮಿಯು ಪದ್ಮಾವತಿಯಾಗಿ ನೆಲೆನಿಂತು ಭಕ್ತಜನರನ್ನು ಹರಸುತ್ತಾ ಪ್ರಕೃತಿಯ ಸೌಂದರ್ಯವನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಇಲ್ಲಿ ಮಾಘಶುದ್ಧ ಸಪ್ತಮಿಯಲ್ಲಿ ಶ್ರದ್ಧೆಯೊಡಗೂಡಿ ಪ್ರಾತಃಕಾಲದಲ್ಲಿ ಈ ಹೇಮಾವತಿ ನದಿಯಲ್ಲಿ ಯಾರು ಸ್ನಾನಮಾಡುತ್ತಾರೆಯೋ ಅಂತಹವರಿಗೆ ಪುಣ್ಯಫಲವು ಅತಿಶಯವಾಗಿ ಉಂಟಾಗುತ್ತದೆ.

ಹೇಮಾವತಿ ನದಿಯ ಮಧ್ಯದಲ್ಲಿನ ಶಿಲಾತಲದ ಮೇಲೆ ನಿಂತು ತಪಸ್ಸುಮಾಡಿ ಭಗವಂತನನ್ನು ಸಂತೋಷಪಡಿಸಿದ್ದಕ್ಕಾಗಿ ಆ ಶಿಲೆಯು ಭೃಗುಶಿಲೆಯೆಂದು ಪ್ರಖ್ಯಾತಿ-ಪಡೆದಿದ್ದು ಇಂದಿಗೂ ತೆಪ್ಪೋತ್ಸವದ ದಿನದಂದು ಪೂಜೆಯನ್ನು ನಡೆಸಲಾಗುತ್ತದೆ. ಈ ಹೇಮಾವತಿಯಲ್ಲಿ ಸ್ನಾನಮಾಡಿ ಭೃಗುಶಿಲೆಯಲ್ಲಿ ಶ್ರದ್ಧೆಯಿಂದ ಜಪಮಾಡಿದರೆ ಅಂಥಹವರು ಬಹಳ ಶೀಘ್ರವಾಗಿ ಸಿದ್ಧಿಯನ್ನು ಪ್ರಾಪ್ತಿಮಾಡಿಕೊಳ್ಳುವರು. ಈ ಸುಕ್ಷೇತ್ರವೂ ಅಂದಿನಿಂದ ಭೃಗುಕ್ಷೇತ್ರವೆಂದು ಸಹ ಪ್ರಖ್ಯಾತಿ ಹೊಂದಿದೆ.

ಕಲಿಯುಗದ ಐದು ಸಾವಿರ ವರ್ಷಗಳು ಕಳೆದಿದ್ದರೂ ಈಗಲೂ ಈ ಸ್ಥಳವೂ ಶಾಂತವಾಗಿಯೇ ಉಳಿದಿರುತ್ತದೆ. ಇಲ್ಲಿನ ಹೇಮಾವತಿ ನದಿಯಲ್ಲಿ ಸಾವಿರಾರು ವರ್ಷಗಳ ಹಿಂದೆ ಚಿನ್ನದ ತೇರೊಂದು ಸಹ ಮುಳುಗಡೆಯಾಗಿದೆ ಎಂಬ

ಜನಪದರಲ್ಲಿನ ನಂಬಿಕೆಯೊಂದು ತಾಂಡವವಾಡುತ್ತಿದೆ. ಹೇಮಾವತಿ ನದಿಯ ಮಧ್ಯದಲ್ಲಿ ಭೃಗುಶಿಲೆಗೆ ತೆಪ್ಪೋತ್ಸವದ ದಿವಸ ಪೂಜಾಕಾರ್ಯಗಳು ನೆರವೇರುವುದು. ಇದರ ಸುತ್ತ-ಮುತ್ತಲೂ ಸುಮಾರು ನಲವತ್ತಕ್ಕೂ ಮೀರಿದಂತಹ ದೇವರ ಆವರಣಗಳಿದ್ದು ಸಂಪ್ರೋಕ್ಷಣೆಗಾಗಿ ಬರುವ ಪದ್ಧತಿಯೊಂದು ಇದ್ದು ಇದಕ್ಕೆ "ನಿಧಿ"-ಯೆಂದು ಕರೆಯುತ್ತಾರೆ. ಅನೇಕ ಕಠಿಣವಾದ ಖಾಯಿಲೆಗಳೂ ಇಲ್ಲಿನ ಗಿರಿಪ್ರದಕ್ಷಿಣೆಯಿಂದ ವಾಸಿಯಾಗುತ್ತದೆಯೆಂಬ ನಂಬಿಕೆಯಿದ್ದು ಇದರ ಮಹಾತ್ಮೆಯು ಕೃತಯುಗ-ದಿಂದಲೂ ಪುರಾಣಪ್ರಸಿದ್ಧಿಯಾಗಿದೆ.

ಪೂರ್ವಕಾಲದ ಕೃತಯುಗದಲ್ಲಿ ಎಲ್ಲಾ ಮುನಿಗಳು ನೈಮಿಶಾರಣ್ಯದಲ್ಲಿ ಸೇರಿದವರಾಗಿ ಪೌರಾಣಿಕನಾದ ಸೂತನನ್ನು ಕುರಿತು ಪ್ರಶ್ನೆ ಮಾಡಿದರು. ಏನೆಂದರೆ ಎಲೈ ಸೂತ ಪುರಾಣಿಕನೇ ನೀನು ಪ್ರಯೋಗದ ಮೊದಲಾದ ಅನೇಕ ದಿವ್ಯಕ್ಷೇತ್ರಗಳ ಮಹಿಮೆಗಳನ್ನು ತಿಳಿದವನಾಗಿರುತ್ತೀಯೇ! ಎಲ್ಲಿ ಲಕ್ಷ್ಮೀಪತಿಯೂ ಪಾರ್ವತಿ ಪತಿಯೂ ಗಂಗಾನದಿಗೆ ಸಮಾನವಾದ ದಿವ್ಯ ನದಿಯು ಯಾವ ಸ್ಥಳದಲ್ಲಿರುತ್ತದೆ. ಇದನ್ನು ತಿಳಿಸಬೇಕೆಂದು ಬೆಸಗೊಳ್ಳಲು ಸೂತನು ಹೇಳುತ್ತಾನೆ.

"ಎಲೈ ಋಷಿಗಳಿರಾ ಕೇಳಿರಿ, ನೀವು ಮಾಡಿದ ಪ್ರಶ್ನೆಯು ಭಗವಂತನ ಕಥಾಮೃತಸಾರದಿಂದ ಕೂಡಿದುದು. ಆದ್ದರಿಂದಲೇ ಪರಮಪವಿತ್ರವಾದುದು, ಪುಣ್ಯನದಿಯಾದ ಕಾವೇರಿಗೆ ೧೬ ಮೈಲಿಗಳೊಳಗೆ ಭೃಗುಕ್ಷೇತ್ರವೆಂಬ ಪ್ರಸಿದ್ಧವಾದ ಒಂದು ದಿವ್ಯಸ್ಥಳವಿದೆ. ಅದರ ಪಕ್ಕದಲ್ಲೇ ಹೇಮಾವತಿ ಎಂಬ ನದಿಯು ಸಹ್ಯಾದ್ರಿ ಪರ್ವತ ಪರ್ಯಂತ ಪಶ್ಚಿಮವಾಹಿನಿಯಾಗಿ ಹರಿಯುತ್ತಿರುವುದು. ಆ ನದಿಯ ದಡದಲ್ಲೇ 'ಹೇಮಗಿರಿ' ಎಂಬ ಪರ್ವತ ಶ್ರೇಷ್ಠವಿರುವುದು. ಆ ಪರ್ವತದಿಂದ ಉತ್ತರಕ್ಕೆ ಮೂರು ಮೈಲಿ ದೂರದಲ್ಲಿ 'ರತ್ನಗಿರಿ' ಎಂಬ ಪರ್ವತವೂ, ಅದೇ ಹೇಮಗಿರಿಗೆ ಸ್ವಲ್ಪ ಈಶಾನ್ಯ ಭಾಗಕ್ಕೆ ಸೇರಿದಂತೆ ೧೬ ಮೈಲಿ ಅಂತರವಿರುವ 'ಯಾದವಾದ್ರಿ' ಎಂಬ ಬೆಟ್ಟದಲ್ಲಿ ತಿರುನಾರಾಯಣ ಸ್ವಾಮಿಯು ಶ್ರೀ ಭೂನೀಳಾ ಸಮೇತರಾಗಿ ರಾರಾಜಿಸುತ್ತಿರುವನು.

ಈ ಹೇಮಗಿರಿಗೆ ಪಶ್ಚಿಮದಿಕ್ಕಿನಲ್ಲಿ ಕಾಶೀಕ್ಷೇತ್ರದಿಂದ ಬಂದು ವಿಶ್ವೇಶ್ವರನೂ, ಬಿಂದು ಮಾಧವಸ್ವಾಮಿಯೂ, ಕ್ಷೇತ್ರಪಾಲನೂ, ವಿನಾಯಕನು ಅನ್ನಪೂರ್ಣದೇವಿಯೂ ಎಲ್ಲರೂ ನೆಲೆಸಿರುವರು. ಬಿಂದುಮಾಧವನು ಶ್ರೀನಿವಾಸನೆಂದೂ ವಿಶ್ವೇಶ್ವರನು

ಸೋಮೇಶ್ವರನೆಂದೂ ಅನ್ನಪೂರ್ಣದೇವಿಯು ವಿಶಾಲಾಕ್ಷಿ ಎಂದೂ ಪ್ರಸಿದ್ಧರಾಗಿ ರಾರಾಜಿಸುತ್ತಿರುವರು.

ಆ ಪರಮಾತ್ಮನ ಅಪ್ಪಣೆಯಂತೆ ಸಮಸ್ತರಾದ ದೇವತೆಗಳೂ (ಚಂದಗಾನಹಳ್ಳಿ ಅಮ್ಮ, ದೊಡ್ಡಮ್ಮ, ಏಳೂರಮ್ಮ, ಆಂಜನೇಯ ಲಕ್ಷ್ಮೀದೇವಿ, ಹೊನ್ನೇಲದಮ್ಮ, ಮುತ್ತುರಾಯಸ್ವಾಮಿ, ಶ್ರೀಕೃಷ್ಣಸ್ವಾಮಿ ಮುಂತಾದ ದೇವತಾ ವಿಶೇಷಗಳು) ಆ ಸುತ್ತಮುತ್ತಲೂ ನೆಲಸಿರುವರು. ಯಾರು ಈ ಪಶ್ಚಿಮವಾಹಿನಿಯಾದ ಹೇಮಾವತಿಯಲ್ಲಿ ಸ್ನಾನಮಾಡಿ ಶ್ರೀ ಕಲ್ಯಾಣ ವೆಂಕಟರಮಣಸ್ವಾಮಿಯವರನ್ನು ದರ್ಶನ ಮಾಡುತ್ತಾರೋ ಅವರು ಐಶ್ವರ್ಯವಂತರೂ ಪುತ್ರ ಪೌತ್ರಾಭಿವೃದ್ಧಿಯುಳ್ಳವರೂ ಹಿಂದೆ ಏಳು ಜನ್ಮಗಳಿಂದ ಮಾಡಿದ ಶಾಪದಿಂದ ವಿಮುಕ್ತ ಆಗುವರು. ಈ ಕ್ಷೇತ್ರದಲ್ಲಿ ಮಾಡಿದ ಸ್ವಲ್ಪ ದಾನವೂ ಕೂಡ ಮಹತ್ತರವಾಗಿ ಪರಿಣಮಿಸುವುದು.

ಈ ದಿವ್ಯ ನದಿಯಲ್ಲಿ ಯಾರು ತಮ್ಮ ಪಿತೃಗಳನ್ನು ಉದ್ದೇಶಿಸಿ ತರ್ಪಣಾದಿ-ಗಳನ್ನು ನೀಡುವರೋ ಅಂತವರಲ್ಲಿ ಪಿತೃದೇವತೆಗಳು ಸುಪ್ರೀತರಾಗಿ ಬ್ರಹ್ಮಾದಿ ದಿವ್ಯಲೋಕಗಳನ್ನು ಅನುಗ್ರಹಿಸುವರು. ಅದರಲ್ಲೂ ಮಾಘಶುದ್ಧ ಸಪ್ತಮಿಯ ದಿವಸ ಶಾಸ್ತ್ರಕ್ರಮದಂತೆ ಸ್ನಾನಮಾಡಿ ಸ್ವಾಮಿಯ ದರ್ಶನ ಮಾಡಿದ ಮಹಾತ್ಮನನ್ನು ಕಂಡ ದೇವತೆಗಳೂ ಸಂತೋಷಪಡುವರು.

ಹಿಂದೆ ಒಂದಾನೊಂದು ಕಾಲದಲ್ಲಿ ಜನಮೇಜಯಮಹಾರಾಜನು ಸರ್ಪ ಯಾಗಮಾಡಿ ಅನಂತರ ಆ ಯಾಗದಲ್ಲಿ ಮಹಾಸರ್ಪಗಳನ್ನು ಕೊಂದ ಪಾಪ ನಿವಾರಣೆಗಾಗಿ ಕಾಶಿಗೆ ಹೋಗಿ ಗಂಗಾನದಿಯ ದಕ್ಷಿಣ ದಿಕ್ಕಿನಲ್ಲಿ ಕಠಿಣವಾದ ತಪಸ್ಸನ್ನಾಚರಿಸುತ್ತಿರಲು ಸಂತುಷ್ಟನಾದ ಜನಾರ್ಧನನು ತಾನಾಗಿಯೇ ಆ ರಾಜನನ್ನು ಕರೆದು ಎಲೈ ಜನಮೇಜನೇ ನಿನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆನು. ನೀನು ಈಗಲೇ ದಕ್ಷಿಣ ದೇಶದಲ್ಲಿ ಕಾವೇರಿಯಿಂದ ಉತ್ತರಕ್ಕೆ ಸುಮಾರು ೧೬ ಮೈಲಿ ದೂರದಲ್ಲಿ "ಹೇಮಗಿರಿ" ಎಂಬ ಪರ್ವತ ಶ್ರೇಷ್ಠವಿರುವುದು ಆ ಪರ್ವತದ ಸಮೀಪದಲ್ಲೇ ಹೇಮಾವತಿಯು ಕಿಲಕಿಲ ಧ್ವನಿಯಿಂದ ನಾದಮಾಡುತ್ತಾ ಹರಿಯುತ್ತಿರುವಳು. ಆ ಪುಣ್ಯ ಪರ್ವತದ ತಪ್ಪಲಲ್ಲೇ ತ್ರಿಕಾಲಜ್ಞಾನರಾದ ಭೃಗುಋಷಿಗಳ ದಿವ್ಯ ಆಶ್ರಮ-ವಿರುವುದು. ಆ ಪರ್ವತದಲ್ಲಿ ಶಂಖ, ಚಕ್ರ ಗದಾಧರನಾದ ಸ್ವಾಮಿಯು ಭೃಗುವಿನಿಂದ ಪೂಜೆಯನ್ನು ಕೈಗೊಳ್ಳುತ್ತಿರುವನು. ನಿನಗಿಂತಲೂ ಪೂರ್ವದಲ್ಲಿ ಇಂದ್ರದ್ಯುಮ್ನನೆಂಬ ರಾಜನು ಆ ಸ್ವಾಮಿಯನ್ನು ಆರಾಧಿಸಿ ಇಷ್ಟಾರ್ಥವನ್ನು ಹೊಂದಿದನು.

ಅಲ್ಲಿ ಪಾರ್ವತಿಯು (ಚಂದಗಾನಹಳ್ಳಿ ಅಮ್ಮ) ಕಾಳಿ ಎಂದು ಪ್ರಖ್ಯಾತ-ಳಾಗಿರುವಳು. ನೀನು ಆ ಭೃಗುಕ್ಷೇತ್ರವನ್ನೈದು ಹೇಮಾವತಿಯಲ್ಲಿ ಸ್ನಾನಮಾಡಿ ಆ ಶ್ರೀನಿವಾಸಸ್ವಾಮಿಯನ್ನು ಏಕನಿಷ್ಠೆಯಿಂದ ತಪೋಭಕ್ತಿಯಿಂದ ಪೂಜಿಸಿದ್ದೇ ಆದರೆ ನಿನಗೆ ಉಂಟಾಗಿರುವ ಸರ್ಪವನ್ನು ಕೊಂದ ದೋಷವು ತಕ್ಷಣ ನಾಶವಾಗುವುದು ಎಂದು ಹೇಳಿ ಮಾಯವಾದನು.

ಅನಂತರ ಜನಮೇಜಯನು ದಕ್ಷಿಣ ದೇಶಕ್ಕೆ ಬಂದು ಹಾಗೆಯೇ ಭೃಗುಕ್ಷೇತ್ರವನ್ನು ಹುಡುಕಿ ಬಂದು ಅಲ್ಲಿಯೇ ಹೇಮಗಿರಿ ಎಂಬ ಗ್ರಾಮವನ್ನು ನಿರ್ಮಾಣ ಮಾಡಿ ಅದನ್ನು ಬ್ರಾಹ್ಮಣರಿಗೆ ದಾನ ಮಾಡಿದನು. (ಆ ಊರಿಗೆ ಈಗ 'ಬಂಡಿಹೊಳೆ' ಎಂದೂ ಹೆಸರಾಗಿದೆ.) ಅಲ್ಲಿ ಶಿಥಿಲವಾಗಿದ್ದ ಸೋಮೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಹೇಮಗಿರಿಯಲ್ಲಿ ತಾನು ಪೂಜೆ ಮಾಡಿದ ಶ್ರೀನಿವಾಸಸ್ವಾಮಿಯವರಿಗೆ ಅನೇಕ ಗ್ರಾಮಗಳನ್ನು ಇನಾಮತಿಯಾಗಿ ಕೊಟ್ಟು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಯಲ್ಲಿ ವಿಷ್ಣುಲೋಕವನ್ನು ಹೊಂದಿದನು. ಈ ಭೃಗುಕ್ಷೇತ್ರದಲ್ಲಿ ಈಗ ಜನಮೇಜಯ ಮಹಾರಾಜನು ಯಾಗ ಮಾಡಿದ ಸ್ಥಳದಲ್ಲಿ ಹೋಮದ ಬೂದಿಯು ಅಗ್ನಿಕುಂಡದ ದೊಡ್ಡ ದೊಡ್ಡ ಇಟ್ಟಿಗೆಯ ಚೂರುಗಳು ಸಿಕ್ಕುತ್ತವೆ. ಆಗಿನ ಕಾಲದ ವೃಕ್ಷ ಸಂಪತ್ತೆಲ್ಲವೂ ಕ್ಷೀಣವಾದರೂ ಒಂದು ದೊಡ್ಡಾಲದ ಮರವೆಂಬ ಮಹಾವೃಕ್ಷವು ಮಾತ್ರ ಇಂದಿಗೂ ಪೂರ್ವ ಸ್ಮರಣೆಯನ್ನು ನಮಗೆ ತಂದುಕೊಡುತ್ತಿದೆ. ಇದರ ಪೂರ್ವ ಪಶ್ಚಿಮ ವಿಸ್ತಾರ ೪೪.೫ ಗಜ (೧೩೪ ಅಡಿ) ದಕ್ಷಿಣೋತ್ತರ ೧೩೨ ಅಡಿ ಬುಡದ ಸುತ್ತಳತೆ ೨೪ ಗಜ (೭೨ ಅಡಿ) ಈ ಮರದ ಕೆಳಗೆ ಕನ್ನಂಬಾಡಿ ಅಮ್ಮನ ಹಬ್ಬವನ್ನು ಆಚರಿಸುತ್ತಿದ್ದರು ಮಳೆಯು ಬಾರದೆ ಅನಾವೃಷ್ಟಿಯು ತಲೆದೋರಿದಾಗ ಈ ಮರಕ್ಕೆ ಪೂಜೆ ಮಾಡಿ ಅದರ ನಾಲ್ಕು ದಿಕ್ಕಿನಲ್ಲೂ ಒಂದೊಂದು ಬೀಳಲನ್ನು ಕಡಿದರೆ ಮಳೆಯು ಖಂಡಿತ ಬರುತ್ತದೆಂದು ಗ್ರಾಮಸ್ಥರ ನಂಬಿಕೆಯಾಗಿದೆ. ಅದರಂತೆ ನಡೆಯುತ್ತಲೂ ಇದೆ.

**ಸುತರು ಮತ್ತೆ ಹೇಳುತ್ತಾರೆ:** ಈ ಶ್ರೀನಿವಾಸ ದೇವರ ಮಹಾತ್ಮೆಯು ಸರ್ವಪಾಪಗಳನ್ನೂ ನಾಶಮಾಡುವಂತಹುದು. ಈ ಸರ್ವೇಶ್ವರನು ವೈಕುಂಠದಲ್ಲಿ ನೆಲೆಸಿದ್ದರೂ ಭಕ್ತ ಇಷ್ಟಾನುಸಾರವಾಗಿ ಈ ಪರ್ವತ ಶಿಖರದಲ್ಲಿ ಪ್ರಕಾಶಿಸುತ್ತಿರುವನು. ಅವನು ಸರ್ವಾಂತರ್ಯಾಮಿಯು, ಎಲ್ಲರಲ್ಲೂ ನೆಲಸಿರುವನು, ಶಂಖ ಚಕ್ರಗದೆಗಳಿಂದ

ಕೂಡಿರುವನು, ನೀಲಮೇಘದಂತೆ ಶ್ಯಾಮಲ ಆ ಕೃತಿಯುಳ್ಳವನೂ, ಅವನನ್ನೂ ನಾಲ್ಕು ವೇದಗಳೂ ಉಪನಿಷತ್ತುಗಳೂ ೧೮ ಪುರಾಣಗಳೂ ಬ್ರಹ್ಮನೂ, ಇಂದ್ರಾದಿ ೮ ಜನ ದಿಕ್ಪಾಲಕರು, ವಿದ್ಯಾಧರರು, ಕಿನ್ನರರೂ ಸಮಸ್ತ ತೀರ್ಥಗಳೂ ಸೇವಿಸುತ್ತಿರುವರು.

ಸಪ್ತಸಾಗರಗಳಿಂದಲೂ, ಸಪ್ತ ದ್ವೀಪಗಳಿಂದಲೂ, ಸಪ್ತ ದ್ವೀಪಗಳಲ್ಲಿರುವ ಋಷಿದೇವ ಗಣಗಳಿಂದಲೂ ಕೂಡಿ ಆ ಸ್ವಾಮಿಯು ಈ ಪರ್ವತದಲ್ಲಿ ಅವಿರ್ಭವಿಸಿದನು. ಆ ಸ್ವಾಮಿಯು ಇಲ್ಲಿ ಕಾಣಿಸಿಕೊಂಡಾಗ ಈ ಪರ್ವತದ ಸುತ್ತಲೂ ಪುಷ್ಪ ವೃಷ್ಟಿಯಾಯಿತು. ನಾನಾ ವಿಧಗಳಾದ ಶಂಖ, ಭೇರಿಕ ಹಳಾದಿಗಳು ಮೊಳಗಿದವು.

ಆ ಭೃಗುಮಹರ್ಷಿಯ ಪ್ರಾರ್ಥನೆಯಂತೆ ಭಗವಂತನು ಭಕ್ತ ಕೋಟಿಯನ್ನು ಉದ್ಧಾರ ಮಾಡಲು ಈ ದಿವ್ಯ ಪರ್ವತದಲ್ಲಿ ರಥಸಪ್ತಮಿಯ ದಿವಸ ಕಾಣಿಸಿಕೊಂಡನು. ಆದ್ದರಿಂದಲೇ ಆ ದಿನ ರಥೋತ್ಸವವನ್ನು ಏರ್ಪಾಡು ಮಾಡಿರುವರು. ಶಾಸ್ತ್ರದಲ್ಲಿ ಪ್ರತಿಷ್ಠಾನಕ್ಷತ್ರ ವಿಷ್ಣು ಪಂಚದಿನ ನಕ್ಷತ್ರ, ವಿಷ್ಣು ವಾಯನಗಳಲ್ಲಿ ತೀರ್ಥಸ್ನಾನವನ್ನು ನಿರ್ಣಯಿಸಿ ಹಿಂದಕ್ಕೆ ೩-೫-೭-೯ ದಿವಸಗಳ ತೇರನ್ನು ಆರಂಭಿಸಬೇಕೆಂದು ಹೇಳಿದೆ. ಇಲ್ಲಿ ಭೃಗುಮಹರ್ಷಿಗಳೇ ರಥಸಪ್ತಮಿ ದಿನ ರಥೋತ್ಸವವನ್ನು ನಿರ್ದೇಶಿಸುತ್ತಾರೆ. ಹೀಗೆ ವರಪ್ರದನಾದ ಸ್ವಾಮಿಯನ್ನು ಪೂಜಿಸಲು ಬ್ರಹ್ಮನೇ ಮೊದಲಾದ ದೇವತೆಗಳೂ ಯೋಗಿಗಳೂ, ಸನಕಾದಿ ಮಹರ್ಷಿಗಳೂ, ಗಂಧರ್ವರೂ, ಈ ಹೇಮಾವತಿಯಲ್ಲಿ ಸ್ನಾನ ಮಾಡಿ ನಾನು-ನಾನು ಎಂಬುದಾಗಿ ಸ್ವಾಮಿಯ ದರ್ಶನಕ್ಕೆ ಹಾತೊರೆಯುತ್ತಿರುವರು. ಇಲ್ಲಿ ಸ್ವಾಮಿಯ ದರ್ಶನ ಮಾಡಿದರೆ ಎಂತಹ ಮಹಾಘಾತಕಗಳು ನಾಶವಾಗುವುವು. ಯಾವನಾದರೊಬ್ಬನು ಪ್ರಯತ್ನಪೂರ್ವಕವಾಗಿ ಈ ಕ್ಷೇತ್ರಕ್ಕೆ ಬಂದು ದೇವರನ್ನು ಪೂಜಿಸಿದ್ದೇಯಾದರೆ ಅವನು ಕುಲಕೋಟಿಗಳಲೆಲ್ಲಾ ಉದ್ಧಾರವಾಗುವನು.

ಈ ಸ್ವಾಮಿಯ ಗುಡಿಯ ಸುತ್ತಲೂ ಇರುವ ಹಾಸುಗಲ್ಲುಗಳ ಮೇಲೆ ಕುಳಿತು ಎಷ್ಟೋ ಜನ ಮಹಾತ್ಮರು ಈಗಲೂ ಜಪಧ್ಯಾನ ಪಾರಾಯಣಗಳನ್ನೂ ಮಾಡುವರು. ಇಲ್ಲಿ ಹೊಳೆಯ ಮಧ್ಯದಲ್ಲಿರುವ ಗಾಯಿತ್ರಿ ಶಿಲೆಯ ಒಂದು ನೋಟ, ಇದರ ಮೇಲೆ ತೆಪ್ಪೋತ್ಸವದ ದಿನ ಪೂಜೆಯೂ, ದೀಪೋತ್ಸವವೂ ನಡೆಯುತ್ತದೆ.

ಈ ಪರ್ವತದಲ್ಲಿ ಆ ಭೃಗುಮಹರ್ಷಿಯು ನಿತ್ಯವೂ ಸ್ವಾಮಿಯವರಿಗೆ ದಿವ್ಯವಾದ ಪುಷ್ಪವನ್ನೂ ಅರ್ಪಿಸುತ್ತಾ ಸೇವೆಯ ಮಾಡುತ್ತಿರುವನಷ್ಟೇ. ಗರುಡಾರೂಢನಾದ ಆ

ಸ್ವಾಮಿಯನ್ನು ದರ್ಶನ ಮಾಡಿದವರು ಮುಕ್ತಿಯನ್ನು ಹೊಂದುವರು. ಧನುರ್ಮಾಸದಲ್ಲಿ ಆ ಸ್ವಾಮಿಗೆ ಬೆಲ್ಲದಿಂದ ಮಾಡಿದ ಪೊಂಗಲನ್ನೂ ನಿವೇದನ ಮಾಡಿದವರೂ, ಕಾರ್ತಿಕಮಾಸದಲ್ಲಿ ದೀಪ ದಾನ ಮಾಡಿದವರೂ, ಮಾಘಮಾಸದಲ್ಲಿ ಹೇಮಾವತಿಯಲ್ಲಿ ಮಂಗಳಸ್ನಾನ ಮಾಡಿದವರೂ, ಸಂಕ್ರಾಂತಿ, ಗ್ರಹಣ, ಮಹಾಲಯ ಅಮಾವಾಸ್ಯೆ ಮುಂತಾದ ಪುಣ್ಯ ದಿನಗಳಲ್ಲಿ ತರ್ಪಣ ಬಿಟ್ಟವರೂ ಬ್ರಾಹ್ಮಣರಿಗೆ ಭೋಜನ ಮಾಡಿಸಿದವರೂ, ಈ ಪರ್ವತದಲ್ಲಿ ಚೈತ್ರಮಾಸದಲ್ಲಿ ವಿಶೇಷ ಪೂಜೆ ಮಾಡಿಸಿದವರೂ ವೈಶಾಕದಲ್ಲಿ ಬ್ರಾಹ್ಮಣ ಭೋಜನ ಮಾಡಿಸಿದವರೂ ಪಾನದಧ್ಯೋದಿನ ಎಳನೀರನ್ನು ಕೊಟ್ಟವರೂ ಉತ್ತಮಲೋಕವನ್ನು ಹೊಂದುವರು. ಯಾರು ಪುಣ್ಯತಮವಾದ ಈ ಕಥೆಯನ್ನು ಕೇಳುತ್ತಾರೋ, ಹೇಳುತ್ತಾರೋ, ಓದಿಸಲು ಸಹಾಯ ಮಾಡುತ್ತಾರೋ ಅವರೆಲ್ಲರೂ ಸಮಸ್ತಪಾಪಗಳನ್ನು ಕಳೆದುಕೊಂಡು ಕೊನೆಯಲ್ಲಿ ಶುಭತರವಾದ ವಿಷ್ಣುಲೋಕವನ್ನು ಹೊಂದುವರು.

ಇತಿ ಶ್ರೀ ಬ್ರಹ್ಮಾಂಡ ಸಪ್ತತ್ರಿಂ ಶೋಧ್ಯಾಯಸ್ಸಮಾಪ್ತಃ

॥ಸಮಸ್ತ ಸನ್ಮಂಗಳಾನಿಭವಂತು॥

## ವಾಲ್ಮೀಕಿ ಮಹಾಪುರಾಣದಲ್ಲಿ ಹೇಮಗಿರಿ ಮಹಾತ್ಮೆ

ಒಂದಾನೊಂದು ಕಾಲದಲ್ಲಿ ಶೌನಕಾದಿ ಮಹರ್ಷಿಗಳು ಸೂತಪೌರಾಣಿಕರನ್ನು ಕುರಿತು ಸ್ವಾಮಿ ಸೂತ ಪೌರಾಣಿಕರೇ, ಭೂಮಿಯ ಪರಿಮಾಣವನ್ನೂ ನದಿಗಳ ಸ್ಥಿತಿಯನ್ನೂ, ತಮ್ಮಿಂದ ಕೇಳಿ ಅಮೃತಪಾನ ಮಾಡಿದಂತೆ ಆಯಿತು. ಅದರಲ್ಲಿಯೂ ಭೂಮಿಯಲ್ಲಿ ಅನೇಕ ತೀರ್ಥಗಳು ಮಹಾಪವಿತ್ರ ಕರಗಳೆಂದು ಕೇಳಲ್ಪಟ್ಟಿತು. ಅವು ಯಾವ ಯಾವ ಫಲಪ್ರದಗಳೆಂಬುದನ್ನು ವಿಸ್ತಾರವಾಗಿ ತಿಳಿಸಬೇಕೆಂದು ಪ್ರಶ್ನೆ ಮಾಡಲಾಗಿ ಸೂತ ಪೌರಾಣಿಕರು ಅಪ್ಪಣೆ ಕೊಡಿಸುತ್ತಾರೆ, ಏನೆಂದರೆ; ಎಲೈ ಋಷಿಗಳಿರಾ ಧನಪ್ರದಮಾಗಿಯೂ ಪುಣ್ಯಪ್ರದವಾಗಿಯೂ ಇರುವ ಮಹಾಖ್ಯಾನವೂ ನಿಮ್ಮಿಂದಾ ಕೇಳಲ್ಪಟ್ಟಿತು. ನಾನು ಕೇಳಿರುವ ಮಟ್ಟಿಗೆ ಅವುಗಳ ಸಂಬಂಧವನ್ನು ಅತಿಕ್ರಮಿಸದೇ ನನಗೆ ತಿಳಿದ ಮಟ್ಟಿಗೆ ಹೇಳುವೆನು. ಈ ವಿಷಯದಲ್ಲಿ ದೇವರ್ಷಿಗಳಾದ ನಾರದರಿಗೂ ಧರ್ಮರಾಯನಿಗೂ ನಡೆದ ಸಂವಾದವನ್ನು ನೋಡಿದಾಗ ಮಹಾರಥಿಕರಾದ ಪಾಂಡವರು ಎಲ್ಲರೂ ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿ ಪತ್ನಿಯಾದ ದ್ರೌಪದಿಯೊಂದಿಗೆ ವಾಸಮಾಡುತ್ತಿರುವ ಕಾಲದಲ್ಲಿ ದೇವರ್ಷಿಗಳಾದ ನಾರದರನ್ನು ಕಂಡರು. ನಾರದರು ಬ್ರಹ್ಮತೇಜಸ್ಸಿನಿಂದ ಉರಿಯುವ ಬೆಂಕಿಗೆ

ಸಮಾನವಾದ ತೇಜಸ್ಸುಳ್ಳವರಾಗಿ ಪ್ರಕಾಶಿಸುತ್ತಲಿದ್ದನು. ಕುರುಕುಲದಲ್ಲಿ ಹುಟ್ಟಿದ ಆ ಧರ್ಮರಾಯನು ಕೂಡ ಸಹೋದರರಿಂದೊಡಗೂಡಿ ದೇವತೆಗಳಿಂದೊಡಗೂಡಿ ಇಂದ್ರನಂತೆ ಪ್ರಕಾಶಿಸುತಲಿದ್ದನು. ಪತಿವ್ರತೆಯಾಗಿ ಪತಿ ಪಾರಾಯಣಳಾಗಿ ಭಾಗ್ಯ ಶಾಲಿನಿಯಾದ ದ್ರೌಪದಿಯೂ ಕೂಡ ಸೂರ್ಯಪ್ರಭೆಯು ಮೇರುಪರ್ವತವನ್ನು ಬಿಡದಿರುವಂತೆ ಧರ್ಮರಾಜಾದಿಗಳನ್ನು ಬಿಡದೆ ಧರ್ಮಪರಾಯಣಗಳಾಗಿದ್ದಳು. ಆ ಕಾಲದಲ್ಲಿ ನಾರದ ಮಹರ್ಷಿಗಳು ಧರ್ಮರಾಯನಿಂದ ಮಾಡಲ್ಪಟ್ಟ ಪೂಜೆಯನ್ನು ಸ್ವೀಕರಿಸಿ ಪ್ರಿಯವಾಗಿಯೂ ಇರುವ ಮಾತುಗಳಿಂದ ಧರ್ಮರಾಯನನ್ನು ಸಮಾಧಾನಪಡಿಸಿದರು. ಮತ್ತು ಮಹಾತ್ಮನಾದ ಧರ್ಮರಾಯನನ್ನು ಕುರಿತು ಎಲೈ ಧರ್ಮಜ್ಞರೊಳಗೆ ಶ್ರೇಷ್ಠನಾದ ಧರ್ಮರಾಯನೇ ನಿನಗೆ ಬೇಕಾದದ್ದು ಏನಿರುವುದು, ಯಾವ ವರವನ್ನು ಕೊಡಲಿ, ಹೇಳು ಎಂಬುದಾಗಿ ಕೇಳಿದರು. ಧರ್ಮರಾಯನು ನಾರದ ಮಹರ್ಷಿಗಳಿಗೆ ನಮಸ್ಕರಿಸಿ ಸ್ವಾಮಿ ಸಮಸ್ತ ಲೋಕದಲ್ಲಿಯೂ ಪೂಜೆಯನ್ನು ಕೈಗೊಳ್ಳುವ ತಾವು ಸಂತುಷ್ಟರಾದ ಮೇಲೆ ತಮ್ಮ ಅನುಗ್ರಹದಿಂದ ಸರ್ವವೂ ಪರಿಪೂರ್ಣವಾಯಿತೆಂದು ತಿಳಿಯುತ್ತೇನೆ. ದೋಷರಹಿತರಾದ ತಮಗೆ ಸಹೋದರ ರಿಂದೊಡಗೂಡಿದ ಅನುಗ್ರಹಯೋಗನಾಗಿದ್ದರೆ ನನ್ನ ಹೃದಯದಲ್ಲಿರುವ ಸಂದೇಹವನ್ನು ಪರಿಹರಿಸಿಕೊಡಬೇಕು. ತೀರ್ಥಯಾತ್ರಾ ಪರವಾಗಿ ಭೂಮಿಯನ್ನು ಪ್ರದಕ್ಷಿಣೆ ಮಾಡಿದವನಿಗೆ ಯಾವ ಫಲವುಂಟಾಗುವುದು. ಅದನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳಲಾಗಿ ನಾರದರು ಎಲೈ ಧರ್ಮರಾಯನೇ, ಪೂರ್ವದಲ್ಲಿ ದಿಲೀಪ ಮಹಾರಾಜನು ಅದೇ ವಿಷಯವನ್ನು ಕುರಿತು ಕೇಳಿದ್ದಕ್ಕೆ ವಸಿಷ್ಠ ಮಹರ್ಷಿಗಳು ಹೇಳಿದ್ದನ್ನೇ ನಿನಗೆ ತಿಳಿಸುವೆ ಕೇಳು ದಿಲೀಪ ಮಹಾರಾಜನು ಸಮಸ್ತರಿಂದಲೂ ಪೂಜಿಸಲ್ಪಡುವ ವೇದವೇದಾಂತ ತತ್ತ್ವಗಳನ್ನು ತಿಳಿಸಿರುವ ವಸಿಷ್ಠ ಮಹರ್ಷಿಗಳನ್ನು ಕುರಿತು ಎಲೈ ತಪೋಧರರೆ ಭೂಪ್ರದಕ್ಷಿಣೆಯನ್ನು ಮಾಡಿದ ಬ್ರಾಹ್ಮಣೋತ್ತಮನಿಗೆ ಉಂಟಾಗುವ ಫಲವನ್ನು ತಿಳಿಸಬೇಕೆಂದು ಪ್ರಶ್ನೆ ಮಾಡಲು ವಸಿಷ್ಠರು ಎಲೈ ರಾಜನೆ, ಋಷಿಗಳಿಗೆ ಮುಖ್ಯ ಆಧಾರವಾದ ತೀರ್ಥಗಳಲ್ಲಿ ಉಂಟಗುವ ಫಲಗಳನ್ನು ಹೇಳುವೆನು, ಏಕಾಗ್ರಚಿತ್ತನಾಗಿ ಕೇಳು ಸಾಮಾನ್ಯವಾಗಿ ತೀರ್ಥಯಾತ್ರೆಯನ್ನು ಮಾಡಿದ ಮಾತ್ರದಿಂದಲೇ ತೀರ್ಥಯಾತ್ರೆಯ ಫಲವು ಸಕಲರಿಗೂ ದೊರೆಯಲಾರದು. ತೀರ್ಥಯಾತ್ರೆಯನ್ನು ಮಾಡುವುದರಲ್ಲಿ ಯಾರು ಕೈಕಾಲುಗಳನ್ನು ಅಕಾರ್ಯಗಳಿಂದ ತಡೆದು ವಿದ್ಯೆ, ತಪಸ್ಸು, ಕೀರ್ತಿ ಇವುಗಳಲ್ಲಿ ನಿರತರಾಗಿರುವರೋ ಅಂಥವರೇ ತೀರ್ಥಯಾತ್ರೆಯ ಫಲವನ್ನು ಅನುಭವಿಸುವರು. ದಾನವನ್ನು ತೆಗೆದುಕೊಂಡು

ಸಂತುಷ್ಟನಾಗಿಯೂ, ನಿಯಮವುಳ್ಳವನಾಗಿಯೂ, ಪರಿಶುದ್ಧನಾಗಿಯೂ, ಅಹಂಕಾರ-ವಿಲ್ಲದೆಯೂ ಇರುವಂಥಾವನು, ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ಎಲೈ ರಾಜನೇ ಕೇಳು, ಕೋಪವಿಲ್ಲದವನಾಗಿಯೂ ಸಮಸ್ತ ಸತ್ಯಶೀಲನಾಗಿಯೂ ವ್ರತಗಳಲ್ಲಿ ದಾರ್ಢ್ಯವುಳ್ಳ ವನಾಗಿಯೂ ಸಮಸ್ತ ಪ್ರಾಣಿಗಳನ್ನೂ ತನ್ನಂತೆ ತಿಳಿಯುವನಾಗಿಯೂ ಇರುವ ಮನುಷ್ಯನು ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ಋಷಿಗಳು ಅನೇಕ ಯಜ್ಞಗಳನ್ನು ಹೇಳಿರುವರು, ಇಹಲೋಕ ಪರಲೋಕಗಳಲ್ಲಿ ತದನುಗುಣವಾದ ಫಲವನ್ನು ಸಹ ಹೇಳಿರುತ್ತಾರೆ. ಆ ಯಜ್ಞಗಳು ದರಿದ್ರರಿಗೆ ಅಸಾಧ್ಯಗಳು, ಯಜ್ಞಗಳು ಅನೇಕ ಉಪಕರಣಗಳುಳ್ಳದಾಗಿಯೂ ನಾನಾ ವಿಧಗಳಾದ ಸಂಬಾರಗಳಿಂದ ದೊಡ್ಡವು-ಗಳಾಗಿಯೂ ಇರುವ ಕಾರಣ ರಾಜರುಗಳಿಂದಲೂ ರಾಜರುಗಳಂತೆ ಸಮೃದ್ಧಿಶಾಲಿ-ಗಳಾದ ಮನುಷ್ಯರಿಂದಲೂ ಸಾಧಿಸಲ್ಪಡುವುದೇ ಹೊರತು ಬಡವರಾಗಿಯೂ, ಸಹಾಯವಿಲ್ಲದವರಾಗಿಯೂ, ಸಾಧನೆಯಗಳಿಲ್ಲದವರಾಗಿಯೂ ಇರುವ ಮನುಜರಿಂದ ಸಾಧಿಸಲು ಆಗತಕ್ಕವುಗಳಲ್ಲ. ಇಂಥಾ ಬಡವರಿಂದಲೂ ಸಾಧಿಸುವುದಕ್ಕೆ ಅರ್ಹ-ವಾಗಿಯೂ ಯಜ್ಞಫಲ ಭೂಗಳಾದ ಪುಣ್ಯಗಳಿಗೆ ಸಮಾನವಾಗಿಯೂ ಇರುವ ವಿಧಿಯೇ ತೀರ್ಥಯಾತ್ರೆಯು, ಭಾವಶುದ್ಧಿಯಿಂದ ತೀರ್ಥಯಾತ್ರೆಯನ್ನು ಮಾಡುವುದರಿಂದ ಯಾವ ಫಲವನ್ನು ಹೊಂದಬಲ್ಲರೋ ಆ ಫಲವನ್ನು ವಿಸ್ತಾರವಾದ ದಕ್ಷಿಣೆಗಳುಳ್ಳ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿದಾಗ್ಯೂ ಹೊಂದಲಾರನು. ಪುಣ್ಯತೀರ್ಥಗಳಲ್ಲಿ ಪುಷ್ಕರ ತೀರ್ಥವು ಸಮಸ್ತ ಪಾಪಗಳನ್ನು ಹೋಗಲಾಡಿಸುವುದು. ಇದರಲ್ಲಿ ಸ್ನಾನಮಾಡಿದವನು ನೂರು ಅಶ್ವಮೇಧಯಾಗಗಳಿಗಿಂತಲೂ ಅಧಿಕವಾದ ಫಲವನ್ನು ಹೊಂದುತ್ತಾನೆ. ನರ್ಮದಾ ನದಿಯು ಪಾಪಗಳ ಹೊರೆಗಳನ್ನು ನಾಶಮಾಡಿ ಸುಖವನ್ನು ಕೊಡತಕ್ಕದ್ದೆಂದು ಹೇಳಲ್ಪಟ್ಟಿದೆ. ಈ ನರ್ಮದೆಯಲ್ಲಿ ಸ್ನಾನ ಮಾಡಿದವನು ಕಲ್ಮಷರಹಿತವಾಗಿ ಸ್ವರ್ಗವನ್ನು ಹೊಂದುತ್ತಾನೆ. ಕಾವೇರಿನದಿಯು ಕಲಿಮಲಗಳನ್ನು ನಾಶಪಡಿಸಿ ಒಳ್ಳೆಯದನ್ನುಂಟುಮಾಡುವುದರಲ್ಲಿ ಹೆಸರುಗೊಂಡಿರುವುದು. ಆ ಕಾವೇರಿ ನದಿಯ ತಿರದಲ್ಲಿ ಅನೇಕ ಪುಣ್ಯಕ್ಷೇತ್ರಗಳುಂಟು. ಕಾವೇರಿಗೆ ಸೇರುವ ಪುಣ್ಯಪ್ರದವಾದ ಹೇಮಾವತಿ ಎಂಬ ನದಿಯಲ್ಲಿ ಸ್ನಾನಮಾಡಿದವರನ್ನು ಸಮಸ್ತಕಲ್ಮಷಗಳನ್ನು ಹೋಗಲಾಡಿಸಿ ಉದ್ಧಾರ ಮಾಡುವುದು. ಈ ಹೇಮಾವತಿ ನದಿಯು ಎಲ್ಲಿ ಪಶ್ಚಿಮ ದಿಕ್ಕಿಗೆ ಪ್ರವಹಿಸುವುದೋ ಎಲ್ಲಿ ಸಾಕ್ಷಾತ್ ಭಗವಂತನು ಕೇಶವ ರೂಪದಿಂದ ನೆಲೆಗೊಂಡಿರುವನೋ ಆ ಸ್ಥಳವು ಭೃಗುಕ್ಷೇತ್ರವೆಂದು ಹೇಳಲ್ಪಡುತ್ತದೆ. ಅಲ್ಲಿ ಮಾಡಿದ

ದಾನಗಳೂ, ಜಪಗಳು, ಸ್ನಾನಗಳೂ ಸಹ ಕೇಶವನ ಅನುಗ್ರಹದಿಂದ ಕೋಟಿಗುಣಿತ-ಗಳಾದವು.

ಧರ್ಮರಾಯನು ಪ್ರಶ್ನೆಮಾಡುತಲಿದ್ದಾನೆ. ಸ್ವಾಮಿ ಪೂಜ್ಯರೇ ಯಾವ ಕಾರಣದಿಂದ ಈ ಸ್ಥಳಕ್ಕೆ ಭೃಗುಕ್ಷೇತ್ರವೆಂಬ ಹೆಸರುಂಟಾಯಿತು? ಕೇಶವ ದೇವರ ಸಾನಿಧ್ಯವೂ ಸಹಾ ಹ್ಯಾಗೆ ಉಂಟಾಯಿತು? ಈ ಅಂಶವನ್ನು ವಿಸ್ತಾರವಾಗಿ ತಿಳಿಸಬೇಕೆಂದು ಪ್ರಶ್ನೆ ಮಾಡಲಾಗಿ ನಾರದರು ಅಪ್ಪಣೆ ಕೊಡಿಸುತ್ತಲಿದ್ದಾರೆ. ಅಯ್ಯಾ ದೊರೆಯೇ, ಬ್ರಹ್ಮಜ್ಞಾನಿಗಳಾದ ಋಷಿಗಳು ಮಾತ್ಸರ್ಯವನ್ನುಳಿದು ರಾಗದ್ವೇಷಗಳನ್ನು ಕಳೆದು ಶಾಂತವಾದ ಮನಸ್ಸುಳ್ಳವರಾಗಿ ನಿಸ್ಪೃಹರಾಗಿರುವ ಕಾರಣ ಎಲ್ಲಿಯೂ ಸಂಚರಿಸಬೇಕಾದ ಅವಶ್ಯಕತೆ ಇಲ್ಲದಿದ್ದಾಗ್ಯೂ ಸಂಸಾರಿಚೇತನರನ್ನು ಅನುಗ್ರಹಿಸು-ವುದಕ್ಕಾಗಿಯೇ ಸರ್ವತ್ರ ಸಂಚರಿಸುವರು. ಹಾಗೆಯೇ ತಪೋನಿಧಿಗಳಾದ ಭೃಗು ಮಹರ್ಷಿಗಳು ಪುಣ್ಯತೀರ್ಥಗಳಲ್ಲಿ ಸಂಚರಿಸುತ್ತ, ಮಾರ್ಗವಶಾತ್ ಕಲಿಮಲಗಳನ್ನು ನಾಶಪಡಿಸಲು ಸಮರ್ಥವಾದ ಕಾವೇರಿಯನ್ನು ಹೊಂದಿದರು. ಅ ಕಾವೇರಿಯು ಪ್ರವಹಿಸುವ ನೀರು ಕಲ್ಲುಗಳ ಮೇಲೆ ಬೀಳುವುದರಿಂದ ಪರಸ್ಪರ ಸಂಘವುಂಟಾಗಿ ಮಧುರವಾದ ಧ್ವನಿ ವಿಶೇಷಗಳಿಂದ ಕಿವಿಗಳಿಗೆ ದಿವ್ಯವಾದ ಸುಖವನ್ನುಂಟು ಮಾಡುತ್ತಲಿದ್ದಿತು. ದಡಗಳಲ್ಲಿ ಬೆಳೆದಿರುವ ವೃಕ್ಷಗಳಿಂದ ನಿರ್ಮಲವಾದ ನೀರಿನಲ್ಲಿ ನಿಂತು ಬೀಳುತ್ತಲೂ ಇರುವ ನಾನಾ ವಿಧವಾದ ಪುಷ್ಪಗಳಿಂದ ಬಹಳ ರಮಣೀಯವಾಗಿ ಕಂಗೊಳಿಸುತ್ತಲಿತ್ತು. ಇಂಥ ಕಾವೇರಿ ಸೊಬಗನ್ನು ನೋಡಿ ಭೃಗುಮಹರ್ಷಿಗಳು ಮನದಲ್ಲಿ ಬಹಳ ಸಂತಸಗೊಂಡರು. ಅನಂತರದಲ್ಲಿ ಆ ಕಾವೇರಿಯಲ್ಲಿ ಸ್ನಾನ ಮಾಡಿ ವೇಲಾವನದಲ್ಲಿ ದಯಮಾಡಿರುವ ನೀಲ ಮೇಘಶ್ಯಾಮನಾಗಿಯೂ ನೀಲವಾದ ಮುಂಗುರುಳುಗಳಿಂದ ಕಂಗೊಳಿಸುವ ಮುಖವುಳ್ಳವರಾಗಿಯೂ ಶರಣಾಗತರನ್ನು ಕಾಪಾಡುವುದರಲ್ಲಿ ನಿರತರಾದ ಪದಕ ಮಲವುಳ್ಳವ ರಾಗಿಯೋ ಇರುವ ಶ್ರೀ ರಂಗನಾಥಸ್ವಾಮಿಯವರನ್ನು ಸೇವಿಸಿ ಕೆಲವು ತಿಂಗಳುಗಳವರೆಗೂ ಅಲ್ಲಿಯೇ ವಾಸಮಾಡಿಕೊಂಡಿದ್ದು, ಅಲ್ಲಿ ಸಂಚರಿಸುತ್ತಾ ಕಾವೇರಿಯ ದಿಕ್ಕಿನಲ್ಲಿ ಹೇಮಾವತಿ ಎಂಬ ಹೆಸರುಳ್ಳ ಪಶ್ಚಿಮಾಭಿಮುಖವಾಗಿ ಪ್ರವಹಿಸುತ್ತಿದ್ದ ಅಂದವಾದ ನದಿಯನ್ನು ಕಮಡರು. ನದಿಯು ಪಶ್ಚಿಮಾಭಿಮುಖವಾಗಿ ಹರಿಯುವುದನ್ನೂ, ಆ ಪ್ರದೇಶದ ಸೌಂದರ್ಯವನ್ನು ನೋಡಿ ಭೃಗು ಮಹರ್ಷಿಗಳು ಈ ಪ್ರದೇಶವು ಎಷ್ಟು ಅಂದವಾಗಿದೆ. ಪಶ್ಚಿಮಾಭಿಮುಖವಾಗಿ ಹರಿಯುವ ನದಿ ಇನ್ನೂ ಅಂದವನ್ನು ಹೆಚ್ಚಿಸುತ್ತಲಿದೆ. ಓ ಪರ್ವತವು ಅಷ್ಟು ಉನ್ನತವೂ ಇಲ್ಲದೆ ಅತಿ ನೀಚವೂ

ಅಲ್ಲದೆ ಬಹು ಸುಂದರವಾಗಿದೆ. ಪರ್ವತವು ಜಾತರೂಪವೆಂದರೆ (ಸುವರ್ಣಮಯ-ವಾದದ್ದು) ಎಂದು ಬಹಳವಾಗಿ ಶ್ಲಾಘಿಸಿದರು. ಅದು ಮೊದಲ ಆ ಪರ್ವತಕ್ಕೆ ಜಾತರೂಪವೆಂದರೆ ಸುವರ್ಣಕ್ಕೆ ಹೆಸರಾಗುವ ಕಾರಣ ಹೇಮಗಿರಿ ಎಂಬ ನಾಮಧೇಯವು ಉಂಟಾಯಿತು. ಅನಂತರದಲ್ಲಿ ಭೃಗುಮಹರ್ಷಿಗಳು ಆ ಪ್ರದೇಶದ ಸೌಂದರ್ಯದಿಂದ ಮುಗ್ಧರಾಗಿ ಇಷ್ಟು ಸೌಂದರ್ಯವಿದ್ದಾಗ್ಯೂ ಕರುಣಾಸಮುದ್ರನಾದ ಪ್ರಪಂಚದ ಸೃಷ್ಟಿ ಸ್ಥಿತಿಲಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ ಭಕ್ತರಲ್ಲಿ ದಯೆಗೈಯುವ, ಭಕ್ತಿಯೊಂದರಿಂದಲೆ ಹೊಂದುವುದೈಕ್ಯ, ಅರ್ಹನಾದ, ಸರ್ವೇಶ್ವರನಾಥ, ಭಗವಂತನಾಥ, ನಾರಾಯಣ ಸಾನಿಧ್ಯವಿಲ್ಲದಿದ್ದರೆ ಸರ್ವಸೌಂದರ್ಯವು ನಿಷ್ಫಲವು. ಕ್ಲೇಶಗಳನ್ನು ನಾಶಗೊಳಿಸುವ ಕೇಶವನ ಸಾನಿಧ್ಯವು ಉಂಟಾದರೆ ಆಗ ಈ ದೇಶದ ಸೌಭಾಗ್ಯವು ಸಫಲವಾಗುವುದು. ಕಲ್ಯಾಣಚರಿತ್ರನಾದ ಭಗವಂತನ ಸಾನಿಧ್ಯವು ಹ್ಯಾಗೆ ಉಂಟಾಗಬೇಕು ಎಂಬುದಾಗಿ ಆಲೋಚಿಸಿ ಭಗವಂತನ ಸಾನಿಧ್ಯಕ್ಕಾಗಿ ತಪಸ್ಸಿನಿಂದ ಭಗವಂತನನ್ನು ಸಂತೋಷಪಡಿಸುವೆನೆಂದು ನಿಶ್ಚಯಿಸಿ ಸ್ನಾನವೇನು, ಜಪವೇನು, ದಾನವೇನು, ಇವುಗಳಲ್ಲಿ ಅನಂತ ಫಲದಾಯಕವಾದ ಮಹಾಜಯೆಯೆಂದು ತಿತಿಯಲ್ಲಿ ಮನೋಹರವಾದ ಒಂದು ಶಿಲಾತಲದ ಮೇಲೆ ಸಿದ್ಧಾಸನವನ್ನು ಧರಿಸಿ ಮೂಲಬಂಧ-ವನ್ನು ಆಚರಿಸಿ ಆ ಮೂಲಬಂಧದ ಮೂಲಕ ಅಪಾನವನ್ನು ಊರ್ಧ್ವಮುಖವಾಗಿ ಪ್ರೇರಿಸಿ ಪೂರಕದಿಂದ ಪ್ರಾಣವಾಯುವನ್ನು ಅಪಾನನೊಂದಿಗೆ ಸೇರಿಸಿ ಪ್ರಾಣಾಯಾಮ-ದಿಂದ ಪರಮಪುರುಷನಾದ ವಾಸುದೇವನನ್ನು ಉಪಾಸನ ಮಾಡಿದರು. ಮಹಾಜಯ-ತಿಥಿಯು ಜಪದಲ್ಲಿ ಅನಂತ ಫಲಪ್ರದವಾದ ಕಾರಣ ನಾರಾಯಣನು ಭೃಗು ಮಹರ್ಷಿಗಳಿಗೆ ತಕ್ಷಣದಲ್ಲಿಯೇ ಪ್ರಸನ್ನನಾದನು. ಅನಂತರದಲ್ಲಿ ಅರಳಿದ ತಾವರೆಯ ಎಸಳಿನಂತೆ ವಿಶಾಲವಾದ ಕಣ್ಣುಗಳಿಂದಲೂ, ಮಂದಹಾಸದಿಂದ ಸುಂದರವಾದ ಮುಖಕಮಲದಿಂದಲೂ, ಮುತ್ತಿನಹಾರಗಳಿಂದ ಸಿಬಗಾಂತ ಕಂಠಪ್ರದೇಶದಿಂದಲೂ, ಅನರ್ಘವಾದ ಕಿರೀಟದಲ್ಲಿ ಪ್ರಕಾಶಿಸುವ ರತ್ನಕಾಂತಿಗಳಿಂದ ಕಂಗೊಳಿಸುವ ಮುಂಗುರುಗಳಿಂದಲೂ ಶ್ರೀವತ್ಸ ಕೌಸ್ತುಭ, ಲಕ್ಷ್ಮಿ ಇವರುಗಳಿಂದ ಮನೋಹರವಾದ ದಿವ್ಯವಕ್ಷಸ್ಥಲದಿಂದಲೂ, ಕಾಲಮೇಘದಂತಿರುವ ದೇಹದಕಾಂತಿಯಿಂದಲೂ, ಶಂಖ ಚಕ್ರಾದಿ ದಿವ್ಯಾಯುಧಗಳನ್ನು ಧರಿಸಿರುವ ಸುಕುಮಾರಗಳಿಂದ ಹಸ್ತ ಕಮಲಗಳಿಂದಲೂ ಸುತ್ತಲೂ ಹತ್ತು ದಿಕ್ಕುಗಳನ್ನು ಬೆಳಗಿಸುವ ದಿವ್ಯಕಾಂತಿಯುಳ್ಳ ದಿವ್ಯಮಂಗಳ ವಿಗ್ರಹ-ದಿಂದಲೂ, ಇಂದ್ರನೇ ಮೊದಲಾದ ದೇವತೆಗಳ ಸಮೂಹದಿಂದ ಅಭಿವಂದಿತವಾದ ಪಾದಕಮಲದಿಂದಲೂ, ಅತಿಶೀತಲವಾಗಿಯೂ ಅತ್ಯಂತ ಸೌಮ್ಯವಾಗಿಯೂ,

ಮನೋಹರವಾಗಿಯೂ, ಪ್ರೇಮದಿಂದ ಆದರ್ಶವಾಗಿಯೂ, ಇರುವ ಕಟಾಕ್ಷ ಪ್ರಸರಣ-ದಿಂದಲೂ, ಪ್ರತ್ಯಕ್ಷ ದರ್ಶನವನ್ನು ದಯಪಾಲಿಸಿರುವ ದಯಾ ಸಮುದ್ರನಾದ, ದೀನಬಂಧುವಾದ ಲಕ್ಷ್ಮೀಪತಿಯಾದ ಪರಮ ಪುರುಷನನ್ನು ಭೃಗುಮಹರ್ಷಿಗಳು ಕಂಡು ಭಾಷ್ಪನಿರುದ್ಧವಾದ ಕಂಠವುಳ್ಳವರಾಗಿ, ಆನಂದಭಾಷ್ಪದಿಂದ ತುಂಬಿದ ಕಣ್ಣುಳ್ಳ-ವರಾಗಿ ಶರೀರದಲ್ಲಡಗಿದ ರೋಮಾಂಚನವುಳ್ಳವರಾಗಿ ಸ್ತೋತ್ರ ಮಾಡಲಾರಂಭಿಸಿದರು.

ವೇತ್ರಾಗ್ರಚಲನಾನುಗುಣವಾಗಿ ವರ್ತಿಸುವ ಪ್ರಪಂಚವುಳ್ಳ ಮಹಾತೇಜಸ್ವಿಗಳಾದ ವಿಷ್ವಕ್ಸೇನರಿಂದ ಮಹಾವಿಶ್ವಾಸದೊಡನೆ ತೋರಿಸಲ್ಪಡುವ ಮಾರ್ಗವುಳ್ಳವರಾಗಿಯೂ, ಹಿಂಭಾಗದಲ್ಲಿ ಫಣಾಮಂಡಲವನ್ನು ಛತ್ರಿಯನ್ನಾಗಿ ಮಾಡಿ ಶುಭ್ರವಾದ ಕಾಂತಿಯಿಂದ ಕಂಗೊಳಿಸುವ ಆದಿಶೇಷನಿಂದಲೂ, ಮುಂಭಾಗದಲ್ಲಿ ವಿನಯದಿಂದ ತಲೆಬಾಗಿರುವ ಪಕ್ಷಿಶ್ರೇಷ್ಠನಾದ ಗುರುತಂತ್ರನಿಂದಲೂ, ಉಭಯಪಾರ್ಶ್ವದಲ್ಲಿ ಮೂರ್ತಿಕರಿಸಿ ಸೇವಾ-ನಿರತರಾಗಿ ನಿಜಾಯುಧಗಳಾದ ಶಂಖ ಚಕ್ರಾದಿಗಳಿಂದಲೂ ಪರಿವೃತನಾಗಿ ಶ್ರೀಭೂದೇವಿ ನೀಳಾದೇವಿಯರಿಂದ ಕೂಡಿ, ನೀಲಮೇಘದಲ್ಲಿ ಉದಯಿಸಿದ ಚಂದ್ರನಂತೆ ಕಂಗೊಳಿಸುವ ಮಂದಹಾಸವುಳ್ಳವನಾಗಿ, ಔದಾರ್ಯ, ಸ್ಥೈರ್ಯ, ಗಾಂಭೀರ್ಯ, ಶೌರ್ಯ, ಧೈರ್ಯ, ದಯೆ ಮೊದಲಾದ ಗುಣಗಳಿಂದ ಕೂಡಿದವನಾಗಿ ಪ್ರತ್ಯಕ್ಷದರ್ಶನವನ್ನು ದಯಪಾಲಿಸಿರುವ ಸ್ವಾಮಿಯನ್ನು ನೋಡಿ ಭೃಗುಮಹರ್ಷಿಗಳು, ನಿರತಿಶಯ ಭಕ್ತಿಯುಕ್ತರಾಗಿ ನಮಸ್ಕಾರ ಮಾಡಿ ಸ್ತೋತ್ರ ಮಾಡಲಿದ್ದಾರೆ.

ಪರ್ವತಕ್ಕೆ ಅಸಾಧಾರಣಚಿಹ್ನವಾದ ಲಕ್ಷ್ಮೀಪತಿತ್ವ ಯುಕ್ತನಾಗಿಯೂ, ಜ್ಯೋತಿಷ್ಟೋಮಾದಿ ಬಹುವಿಧ ಯಜ್ಞಗಳಿಂದ ತನ್ನನ್ನು ಆರಾಧಿಸುವ ಭಕ್ತರುಗಳಿಗೆ ಅಭೀಪ್ಸಿತವಾದ ಫಲಗಳನ್ನು ಕೊಟ್ಟು ಕಾಪಾಡುವನಾದ ಕಾರಣ ಯಜ್ಞಪತಿಯಾಗಿಯೂ, ಅಸುರಾದಿಗಳಿಂದ ಒದಗುವ ನಾನಾ ವಿಧಗಳಾದ ಉಪದ್ರವಗಳನ್ನು ಪರಿಹರಿಸಿ ದೇವತೆಗಳಿಗೆ ಸ್ವಾಮಿಯಾಗಿಯೂ, ಸರ್ವೇಶ್ವರನಾಗಿಯೂ ಯೋಗನಿಷ್ಠರಿಂದ ಉಪಾಸಲ್ಪಡುವುದರಿಂದ ಯೋಗೇಶ್ವರನಾಗಿಯೂ ಇರುವ ಪರಮಪುರುಷನಾದ, ಸರ್ವರಕ್ಷಕನಾದ ನಾರಾಯಣನನ್ನು ಶರಣನನ್ನಾಗಿ ಹೊಂದುತ್ತೇನೆ. ಪುರುಷ ಸೂಕ್ತದಲ್ಲಿ ಹೇಳಿರುವಂತೆ ಅನಂತ ಪದಗಳುಳ್ಳವನಾಗಿಯೂ ಅನಂತ ನೇತ್ರಗಳುಳ್ಳ-ವನಾಗಿಯೂ, ಅನಂತ ಮಸ್ತಕಗಳುಳ್ಳವನಾಗಿಯೂ ಅನಂತವಾದ ರೂಪವುಳ್ಳ ಪ್ರಕೃತಿ ಮಂಡಲಕ್ಕಿಂತಲೂ ಪರದಲ್ಲಿ ಪ್ರಕಾಶಿಸುತ್ತಲಿರುವ ದೇವತೆಗಳಿಂದ ವಂದಿತನಾದ ಸರ್ವರಕ್ಷಕನಾದ ನಾರಾಯಣನನ್ನು ಶರಣು ಹೊಂದುತ್ತೇನೆ. ಚರಾಚರಾತ್ಮಕವಾದ ಪ್ರಪಂಚಕ್ಕೆ ಉಪಾದಾನ ಕಾರಣನಾಗಿಯೂ ನಿಮಿತ್ತಕಾರಣನಾಗಿಯೂ ಆಗಿರುವುದರಿಂದ

ಯಾವ ಭಗವಂತನಲ್ಲಿಯೂ ಪ್ರಪಂಚದ ಸೃಷ್ಟಿಸ್ಥಿತಿ ಲಯಗಳು ಆಗುತ್ತವೆಯೋ, ಯಾವ ನಾರಾಯಣನಿಂದ ಸರ್ವವೂ ವ್ಯಾಪ್ತವಾಗಿದೆಯೋ ಅಂಥಾ ಭಕ್ತಜನರನ್ನು ಕಾಪಾಡುವ ಸ್ವಭಾವವುಳ್ಳ ಸರ್ವರಕ್ಷಕನಾದ ನಾರಾಯಣನನ್ನು ಶರಣು ಹೊಂದುತ್ತೇನೆ. ದಾರೇಶಣ, ಪುತ್ರೇಷಣ, ವಿತ್ತೇಷಣಗಳೆಂಬ ಈಷಣತ್ರಯಗಳನ್ನು ಕಳೆದು ನಿರ್ಮಲರಾದ ಋಷಿಗಳು ಅನನ್ಯಭಾವವುಳ್ಳವರಾಗಿ ನಿರ್ವಿಕಲ್ಪಕ ಸಮಾಧಿಯಲ್ಲಿ ಯಾವ ನಾರಾಯಣನ ನಿರ್ಮಲವಾದ ಅಪ್ರಾಕೃತ ದಿವ್ಯಮಂಗಳ ರೂಪವನ್ನು ನೋಡುವರೋ ಅಂಥಾ ಸರ್ವರಕ್ಷಕನಾದ ನಾರಾಯಣನನ್ನು ಶರಣು ಹೊಂದುತ್ತೇನೆ. ಯಾವ ಭಗವಂತನಲ್ಲಿ ನಾಮಾದಿ ವಿಶೇಷಗಳ ನಿರ್ಣಯವಿರುವುದಿಲ್ಲವೋ, ಯಾವ ನಾರಾಯಣ ಸ್ವರೂಪವೋ, ಅಪ್ರಾಕೃತವಾದ ಕಾರಣ ಪ್ರಾಕೃತ ಚಕ್ಷುಸ್ಸಿಗೆ ಗೋಚರವಾಗುವುದಿಲ್ಲವೋ ಅಂಥಾ ಜನ್ಮರಹಿತನಾಗಿಯೂ, ನಿತ್ಯನಾಗಿಯೂ ಪುರಾಣಪುರುಷನಾಗಿಯೂ ಇರುವ ಸರ್ವರಕ್ಷಕನಾದ ನಾರಾಯಣನನ್ನು ಶರಣುಹೊಂದುತ್ತೇನೆ. ಪ್ರಕೃತಿ ಪುರುಷರುಗಳೂ ಯಾವ ನಾರಾಯಣನಿಂದ ತೇಜಸ್ಸನ್ನು ಧರಿಸುತ್ತಾರೆಯೋ, ವೇದಾರ್ಥವನ್ನರಿತವರು ಯಾವ ನಾರಾಯಣನನ್ನು ಅರಿಯುತ್ತಾರೆಯೋ ಅಂಥಾ ನಾರಾಯಣನನ್ನು ಶರಣುಹೊಂದುತ್ತೇನೆ. ದೇವದೇವನಾಗಿಯೂ, ದಯಾಸಮುದ್ರನಾಗಿಯೂ, ಸರ್ವ-ಪ್ರಾಣಿಗಳಿಗೂ ಶರಣ್ಯನಾಗಿಯೂ, ಸಾವಿರ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ-ವನಾಗಿಯೂ, ಇರುವ ನಾರಾಯಣನನ್ನೂ ಶರಣುಹೊಂದುತ್ತೇನೆ. ಎಲೈ ಸ್ವಾಮಿಯೇ ಹಿಂದೆ ಆದದ್ದು ಮುಂದೆ ಆಗುವುದು, ಸರ್ವವು ನೀನೇ ಆಗಿರುತ್ತೀಯಾದ ಕಾರಣ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಆಗಿಯೂ, ಆಗುತ್ತಲೂ ಇದೆ. ನಿನ್ನಿಂದಲೇ ಯಜ್ಞಗಳೂ, ಆಯಜ್ಞ ಸಾಧಕಗಳಾದ ಹವಿಸ್ಸೂ, ಪಶುಗಳೂ, ಋಗ್ವೇದವೂ, ಸಾಮವೇದವೂ, ಉಂಟಾದವು. ನಿನ್ನಿಂದಲೇ ಕುದುರೆಗಳೂ, ಆನೆಗಳೂ, ಹಸುಗಳು, ಆಡುಗಳು, ಮೃಗಗಳೂ ಉಂಟಾದವು. ನಿನ್ನ ಮುಖದಿಂದ ಬ್ರಾಹ್ಮಣರೂ, ನಿನ್ನ ಬಾಹುಗಳಿಂದ ಕ್ಷತ್ರಿಯರೂ, ನಿನ್ನ ತೊಡೆಗಳಿಂದ ವೈಶ್ಯರೂ, ನಿನ್ನ ಪದಗಳಿಂದ ಶೂದ್ರರೂ ಸಹ ಉತ್ಪನ್ನರಾದರೂ, ನಿನ್ನ ಕಣ್ಣುಗಳಿಂದ ಸೂರ್ಯನು, ಕಿವಿಗಳಿಂದ ವಾಯುವೂ, ಮನಸ್ಸಿನಿಂದ ಚಂದ್ರನೂ ಅಂತಸ್ಸುಷಿರದಿಂದ ಪ್ರಾಣವೂ, ಮುಖದಿಂದ ಅಗ್ನಿಯೂ ಸಹ ಉಂಟಾದರು. ನಿನ್ನ ನಾಭಿ ಪ್ರದೇಶದಿಂದ ಗಗನವು, ಶಿರಸ್ಸಿನಿಂದ ಅಂತರಿಕ್ಷವೂ, ಉಂಟಾದವು ನಿನ್ನ ಕಿವಿಯಿಂದ ದಿಕ್ಕುಗಳೂ ಪಾದಗಳಿಂದ ಭೂಮಿಯೂ ಎಲ್ಲವೂ ನಿನ್ನಿಂದಲೇ ಉಂಟಾದವು. ದೊಡ್ಡದಾದ ಆಲದಮರವು ಅಲ್ಪವಾದ ಬೀಜದಲ್ಲಿ ಹ್ಯಾಗೆ ಇರುವುದೋ ಹಾಗೆ ಬೀಜದಂತಿರುವ ನಿನ್ನಲ್ಲಿ ಸಮಸ್ತ ಪ್ರಪಂಚವೂ ಇರುವುದು.

ಬೀಜದಿಂದ ಮೊಳಕೆಯಾಗಿ ಹುಟ್ಟಿದ ಆಲದಮರವು ವಿಸ್ತಾರವನ್ನು ಹ್ಯಾಗೆ ಹೊಂದುತ್ತದೆಯೋ ಹಾಗೆ ಸೃಷ್ಟಿಯಲ್ಲಿ ನಿನ್ನಿಂದ ಜಗತ್ತು ವಿಸ್ತಾರವನ್ನು ಹೊಂದುತ್ತದೆ. ಬಾಳೆಗಿಡವು ಎಲೆ ನಾರು ಇವುಗಳಿಂದ ಬೇರೆಯಾಗಿ ಹ್ಯಾಗೆ ಕಾಣೂವುದಿಲ್ಲವೋ ಹಾಗೆ ನಿನ್ನಲ್ಲಿರುವ ಪ್ರಪಂಚವೂ ನಿನಗಿಂತಲೂ ಬೇರೆಯಾಗಿ ಕಾಣುವುದಿಲ್ಲ. ಬೇರೆಏನೇ ಆದಾಗ್ಯೂ ಪ್ರಥಮಭೂತವಗಾಗಿ ಸರ್ವವೂ ಆಗುವಂಥ ನಿನಗೆ ನಮಸ್ಕಾರವು. ಸರ್ವದಲ್ಲಿಯೂ ಸರ್ವಭೂತವನಾಗಿ ಸರ್ವಪದಾರ್ಥಗಳ ಸರ್ವರೂಪವನ್ನು ಧರಿಸಿ ಸರ್ವವೂ ನೀನೇ ಆಗುವಿಯಲ್ಲದೆ ನಿನ್ನಿಂದಲೇ ಸರ್ವವೂ ಉಂಟಾಗಿದೆಯಾದ ಕಾರಣ ಸರ್ವಾತ್ಮಕನಾಗಿರುವ ನೀನು ಹೃದಯದಲ್ಲಿರುವುದೆಲ್ಲವನ್ನು ತಿಳಿದಿರುವಿಯಾದ್ದರಿಂದ ವಿಜ್ಞಾಪಿಸಿಕೊಳ್ಳುವುದು ಯಾವುದು ತಾನೇ ಉಳಿದಿದೆ. ಸ್ವಾಮಿ ನನ್ನ ಇಷ್ಟಾರ್ಥವು ನಿನ್ನಿಂದಾ ಸಫಲಗೊಳಿಸಲ್ಪಟ್ಟಿತು. ನನ್ನ ತಪಸ್ಸು ನಿನ್ನ ದರ್ಶನದಿಂದ ಸಫಲವಾಯಿತು. ಈ ಪ್ರಕಾರವಾಗಿ ವಿಜ್ಞಾಪಿಸಿಕೊಳ್ಳುತ್ತಿರುವ ಭೃಗು ಮಹರ್ಷಿಯನ್ನು ನೋಡಿ ಸ್ವಾಮಿಯು ಎಲೈ ಭೃಗುಮುನಿಯೇ ನನ್ನನ್ನು ನೀನು ದರ್ಶನ ಮಾಡಿದುದು ನಿನ್ನ ತಪಸ್ಸಿಗೆ ಫಲವಹುದು ಮತ್ತು ನನ್ನ ದರ್ಶನವು ಎಂದಿಗೂ ನಿಷ್ಪಲವಾಗಲಾರದೆಂದು ಹೇಳಿ ಪ್ರಾರ್ಥಿಸಿಕೊಳ್ಳುವ ಭೃಗುಮುನಿಗೆ ಭಗವಂತನು ವರವನ್ನು ದಯಪಾಲಿಸಿದನು.

ಧರ್ಮರಾಯನು ಪ್ರಶ್ನೆ ಮಾಡುತ್ತಲಿದ್ದಾನೆ. ಸ್ವಾಮಿ ನಾರದರೇ, ಸರ್ವಾರ್ಥ ಸಾಧಕವಾದ ಅನಂತಫಲಪ್ರದವಾದ ಮಹಾಜಯತಿಥಿಯು ಯಾವುದು? ವಿಸ್ತಾರವಾಗಿ ತಿಳಿಸಬೇಕೆಂದು ಪ್ರಶ್ನೆ ಮಾಡಲಾಗಿ ನಾರದರು ಅಪ್ಪಣೆ ಕೊಡಿಸುತಲಿದ್ದಾರೆ. ಭಾನುವಾರವು ಮಾಘಶುದ್ಧ ಸಪ್ತಮಿಯೂ ಸೇರಿದಂತೆ ಆ ದಿವಸಕ್ಕೆ ಮಹಾಜಯ ಎಂದು ಹೆಸರು. ಭಾನುವಾರವಲ್ಲದೆ ಬೇರೇ ವಾರದಲ್ಲಿ ಸೇರಿದರೆ ವಿಜಯಾ ಎಂದು ಹೆಸರು. ಸ್ನಾನದಾನಾದಿಗಳಲ್ಲಿ ಕೋಟಿಲಕ್ಷ ಫಲನೀಯುವುದು, ಮಹಾಜಯೆಯು ವಿಜಯೆಯು ಅನಂತ ಫಲಪ್ರದವಾದದ್ದು. ಇದರಲ್ಲಿ ಆಚರಿಸಿದೆ ಒಂದು ವ್ರತದಿಂದಲೇ ಜನ್ಮ ಬಂಧನದಿಂದ ಬಿಡಲ್ಪಡುತ್ತಾನೆ. ಮಾಘಮಾಸದ ಶುಕ್ಲಪಕ್ಷದ ದಶಮಿಯು ಕೋಟಿ ಭಾಸ್ಕರವೆಂದು ಪ್ರಸಿದ್ಧವಾಗಿದೆ. ಆ ಪುಣ್ಯದಿವಸದಲ್ಲಿ ಉಪವಾಸವನ್ನಾಚರಿಸಿದೆ ಮನುಷ್ಯನು ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಮಾಘ ಶುದ್ಧ ಸಪ್ತಮಿಯು ಸೂರ್ಯ ಗ್ರಹಣಕ್ಕೆ ಸಮಾನವಾದದ್ದು. ಆ ದಿವಸದಲ್ಲಿ ಅರುಣೋದಯ ಕಾಲದಲ್ಲಿ ಮಾಡುವ ಸ್ನಾನವು ಮಹಾಫಲದಾಯಕವು. ವ್ರತವು ಯಾವುದು? ಅದರ ಕ್ರಮವೇನು? ಹ್ಯಾಗೆ ಮಾಡಬೇಕು? ವಿಸ್ತಾರನಾಗಿ ಅಪ್ಪಣೆ ಕೊಡಿಸಬೇಕೆಂದು ಪುನಃ ಧರ್ಮರಾಯನು ಪ್ರಶ್ನೆ ಮಾಡಲಾಗಿ ನಾರದರು ಅಪ್ಪಣೆ ಕೊಡಿಸುತ್ತಾರೆ.

ಉತ್ತರಾಯಣದಲ್ಲಿ ಶುಕ್ಲಪಕ್ಷದಲ್ಲಿ ಭಾನುವಾರದಲ್ಲಿ ಪುರುಷನಕ್ಷತ್ರದಲ್ಲಿ ಸಪ್ತಮಿ ವ್ರತವನ್ನು ಗ್ರಹಿಸಬೇಕು. ಹಸ್ತ, ಅನುರಾಧಾ, ಶ್ರವಣ, ಮೃಗಶಿರಾ, ಪುನರ್ವಸು, ಪುಷ್ಯ, ಇವುಗಳು ಪುರುಷ ನಕ್ಷತ್ರಗಳು ಎಂದು ವಿದ್ವಾಂಸರು ಹೇಳುವರು. ಪಂಚಮಿಯು ದಿನದಲ್ಲಿ ಏಕಭಕ್ತವೂ ಷಷ್ಠಿಯಲ್ಲಿ ನಕ್ತವೂ, ನಕ್ತವೆಂದರೆ –ಸೂರ್ಯನೂ ತನ್ನ ಕಾಂತಿಯನ್ನು ದ್ವಿಗುಣವನ್ನಾಗಿ ಯಾವ ವೇಳೆಯಲ್ಲಿ ಮಾಡಿಕೊಳ್ಳುವನೋ ಆ ವೇಳೆಯು ನಕ್ತವೆನ್ನಿಸಿಕೊಳ್ಳುವುದು. ಆ ವೇಳೆಯಲ್ಲಿ ಭೋಜನಮಾಡುವುದು, ಸಪ್ತಿಮಿ ದಿವಸದಲ್ಲಿ ಉಪವಾಸವನ್ನು ಅಷ್ಟಮಿ ದಿವಸದಲ್ಲಿ ಪಾರಣೆಯನ್ನೂ ಮಾಡುವದು. ಹೀಗೆ ಮಾಡಬೇಕು. ಮತ್ತು ಅರ್ಕವೃಕ್ಷದ ಈಶಾನ್ಯಭಾಗದ ಕೊಂಬೆಯಲ್ಲಿ ಅಗ್ರಭಾಗದಲ್ಲಿರುವ ಸೂಕ್ಷ್ಮವಾದ ಎರಡು ದಳಗಳನ್ನು ನೀರಿನೊಂದಿಗೆ ಹಲ್ಲಿಗೆ ತಗಲಿಸಿಕೊಳ್ಳದೆ ಪಾನಮಾಡಬೇಕು. ಭೂಸ್ಪರ್ಶವಾಗದಂತೆ ಗೋಮಯವನ್ನು ಮಧ್ಯದ ಬೆರಳು ಅಂಗುಷ್ಠದ ಬೆರಳು ಇವುಗಳಿಂದಾ ಒಂದು ಪಲಪ್ರಮಾಣದಷ್ಟು ಹಲ್ಲಿಗೆ ತಗಲಿಸಿಕೊಳ್ಳದೆ ಪಾನಮಾಡುವುದು, ಹುಳುಕಿಲ್ಲದೆ ಹೊಸದಾಗಿಯೂ ದಪ್ಪನಾಗಿಯೂ ಒಣಗಿಯೂ ಇರುವ ಒಂದು ಮೆಣಸನ್ನು ಹಲ್ಲಿಗೆ ತಗಲಿಸಿಕೊಳ್ಳದೆ ಪಾನಮಾಡುವುದು. ನೀರನ್ನು ಬ್ರಹ್ಮಪಿತ್ರಂಗುಲೀ ಮೂಲದಲ್ಲಿ ಪ್ರಸರಿಸುವಂತೆ ಕುಡಿಯುವುದು. ಖರ್ಜೂರನಾರಿಕೇಗಳ ಮೊದಲಾದ ಫಲಗಳಲ್ಲಿ ಒಂದನ್ನು ಹಲ್ಲುಗಳಿಗೆ ತಗುಲಿಸದೆ ಪಾನಮಾಡುವುದು. ಪವಿತ್ರವಾದ ಗೆಣಸನ್ನು ಸೇವಿಸುವುದು. ನಕ್ತವನ್ನು ಮಾಡುವುದು, ಉಪವಾಸವನ್ನು ಮಾಡುವುದು, ಏಕಭುಕ್ತವನ್ನು ಮಾಡುವುದು, ಹಾಲನ್ನು ಆಹಾರವಾಗಿ ಉಪಯೋಗಿಸುವುದು – ಈ ರೀತಿಯುಲ್ಲಿ ಕ್ರಮವಾಗಿ ಸಪ್ತಮಿ ವ್ರತವನ್ನಾಚರಿಸಿದ ಮನುಷ್ಯನು ಇಷ್ಟವಾದ ಫಲಗಳನ್ನು ಹೊಂದುತ್ತಾನೆ. ಫಲಪುಷ್ಪಾನಿಗಳಿಂದಲೂ ಮಂತ್ರಗಳಿಂದಲೂ ಸೂರ್ಯದೇವನನ್ನು ಮೊದಲು ಪೂಜಿಸಿ ಅನಂತರದಲ್ಲಿ ಶಾಸ್ತ್ರೋಕ್ತ ಪ್ರಮಾಣದಿಂದ ಅನ್ನದಾನವನ್ನು ಮಾಡಬೇಕು. ವಿಶೇಷವಾಗಿ ಪೂಜಾಕಾಲದಲ್ಲಿ ಸೂರ್ಯನನ್ನು ಸರ್ವಲಕ್ಷಣ ಸಂಪೂರ್ಣನೆಂತಲೂ ಸರ್ವಆಭರಣ ಭಷಿತನೆಂತಲೂ, ಕೆಂದಾವರೆಯನ್ನು ಕೈಯಲ್ಲಿ ದರಶಿರುವನೆಂತಲೂ, ತೇಜೋಮಯವಾದ ಬಿಂಬವುಳ್ಳ-ವನೆಂತಲೂ, ಬಾಹುಬಲ ಮಧ್ಯದಲ್ಲಿರುವನೆಂತಲೂ, ಪದ್ಮಾಸನದಲ್ಲಿರುವ ನೆಂತಲೂ, ರಕ್ತಚಂದನವನ್ನು ಧರಿಸುವನೆಂತಲೂ ಧ್ಯಾನ ಮಾಡಬೇಕು. ೧೪ನೇ ಶ್ಲೋಕ ರೂಪ-ವಾದ ಮಂತ್ರವನ್ನು ಜಪಿಸುವುದು ಸಪ್ತಮಿಯನ್ನು ವಿಶೇಷ ಜಯವನ್ನು ಉಂಟು-ಮಾಡುವುದೆಂದು ಹೇಳಲ್ಪಟ್ಟಿದೆ. ಪರಿಶುದ್ಧನಾಗಿಯೂ ಪವಿತ್ರವಾದ ಮನಸ್ಸುಳ್ಳವ-ನಾಗಿಯೂ ರಕ್ತಕುಂಕುಮದಂತೆ ಕೆಂಪಾದ ಕಣಗಿಲ ಹೂವುಗಳಿಂದಲೂ

ಹುಲಿಯುಗುರಿನ ಗಿಡದ ಹೂವುಗಳಿಂದಲೂ ಸೂರ್ಯನನ್ನು ಭಕ್ತಿಯಿಂದ ಪೂಜಿಸಬೇಕು. ಅನಂತರದಲ್ಲಿ ಅಷ್ಟಮಿಯಲ್ಲಿ ಪಾರಣೆಯನ್ನು ಮಾಡಬೇಕು ಹೊರ್ತುನವಮಿಯಲ್ಲಿ ಪಾರಣೆಯನ್ನು ಮಾಡಕೂಡದು ನವಮಿಯಲ್ಲಿ ಪಾರಣೆಯನ್ನು ಮಾಡಿದರೆ ವ್ರತಫಲವನ್ನು ಹೊಂದುವುದಿಲ್ಲ. ಅಪರಾಹ್ನದಲ್ಲಿ ಖಾರ, ಕಹಿ, ಹುಳಿ, ಇವುಗಳನ್ನು ಬಿಟ್ಟು ಪಾರಣೆಯನ್ನು ಮಾಡಬೇಕು. ಅಕ್ಕಿಯನ್ನು ಪ್ರಯತ್ನ ಪೂರಕವಾಗಿ ಕಡ್ಡಿ ಮೊದಲಾದವುಗಳನ್ನು ತೆಗೆದು ಚೆನ್ನಾಗಿ ಶೋಧಿಸಬೇಕು ಹೆಸರು ಉದ್ದು, ಎಳ್ಳು ಇವುಗಳನ್ನು ತುಪ್ಪವನ್ನು ಉಪಯೋಗಿಸಿ ಭಕ್ತಿಯಿಂದ ಹಾಲು ಮೊದಲಾದವುಗಳಿಂದ ಬ್ರಾಹ್ಮಣರಿಗೆ ಬೋಜನವನ್ನು ಮಾಡಿಸಬೇಕು. ಯಥಾಶಕ್ತಿ ಅನ್ನಪಾನಗಳಿಂದಲೂ ವ್ಯಂಜನಗಳಿಂದಲೂ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಯೋಗ್ಯತಾನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು.

ಯಾವನು ಈ ಅನಂತ ಫಲಪ್ರದಾಯಕವಾದ ಸಮಸ್ತ ಪಾಪಗಳನ್ನೂ ಹೋಗಲಾಡಿಸುವ, ಧನವನ್ನೂ ಸಂತಾನವನ್ನೂ ವೃದ್ಧಿಪಡಿಸುವ ಸಪ್ತಮಿ ವ್ರತವನ್ನು ಮಾಘಮಾಸದಲ್ಲಿ ಮಾಡುತ್ತಾನೆಯೋ ಮತ್ತು ಸೂರ್ಯನ ಸಂತೊಷಕ್ಕಾಗಿ ಭಕ್ತಿಯಿಂದ ಪಾರಣೆಯನ್ನು ಮಾಡುತ್ತಾನೆಯೋ ಅವನು ಸೂರ್ಯ ಲೋಕವನ್ನು ಹೊಂದುತ್ತಾನೆ. ಕೋಟಿಸಲ್ಪಗಳವರಿಗೂ ಸ್ವರ್ಗದಲ್ಲಿ ವಾಸಮಾಡಿ ಅನಂತರ ಪರಮಪಾದವನ್ನು ಹೊಂದುತ್ತಾನೆ. ಇದು ಪೂರ್ವದಲ್ಲಿ ಈಶ್ವರನಿಂದ ಹೇಳಲ್ಪಟ್ಟಿದ್ದು, ಮಹಾ ರಹಸ್ಯವಾದದು. ಈ ವ್ರತವನ್ನು ಯಾವಾಗಲೂ ಶ್ರವಣ ಮಾಡುವುದರಲ್ಲಿಯೂ ಈ ವ್ರತವನ್ನು ಮಾಡುವುದರಿಂದಲೂ ಶ್ರವಣ ಮಾಡಿಸುವುದರಲ್ಲಿಯೂ ಸಹ ಸಮಾನವಾದ ಫಲವುಂಟೆಂದು ಹೇಳಲ್ಪಟ್ಟಿದೆ.

ಭೃಗುಮಹರ್ಷಿಗಳು ವರವನ್ನು ಬೇಡಿದರೆಂತಲೂ ಭಗವಂತನು ಭೃಗುಮಹರ್ಷಿ ಗಳಿಗೆ ವರವನ್ನು ದಯಪಾಲಿಸಿದನೆಂತಲೂ ತಾವು ಅಪ್ಪಣೆ ಕೊಡಿಸಿದಿರಿ. ಈ ವಿಷಯದಲ್ಲಿ ನನಗೆ ಬಹಳ ಸಂಶಯವುಂಟಾಗಿದೆ. ಯಾಕೆಂದರೆ ಚಿನ್ನ, ಬೆಳ್ಳಿ, ಕಲ್ಲು, ಮಣ್ಣು, ಇವುಗಳಲ್ಲಿ ಸಮಾನವಾದ ಭಾವವನ್ನಿಟ್ಟುಕೊಂಡಿರುವ ನಿಸ್ಪೃಹರಾದ ಭೃಗುಮಹರ್ಷಿಗಳು ಯಾವ ವರವನ್ನು ಕೇಳಿಕೊಂಡರು? ಭಗವಂತನು ತಾನೇ ಯಾವ ವರವನ್ನು ದಯಪಾಲಿಸಿದನು?

ಅಪ್ಪಣೆ ಕೊಡಿಸಬೇಕೆಂದು ಧರ್ಮರಾಯನು ಪ್ರಶ್ನೆಮಾಡಲಾಗಿ ನಾರದರು ಅಪ್ಪಣೆ ಕೊಡಿಸುತ್ತಾರೆ:- ಅಯ್ಯಾ ದೊರೆಯೇ ಭೃಗುಮಹರ್ಷಿಗಳು ಮಣ್ಣು, ಕಲ್ಲು,

ಚಿನ್ನ, ಇವುಗಳಲ್ಲಿ ಸಮಾನಭಾವವನ್ನು ವಹಿಸಿಸಿರುವುದು ನಿಷ್ಪೃಹರಾಗಿರುವುದು ನಿಜವು. ಆದರೂ ಯಾವುದೋ ಒಂದು ವರವನ್ನು ಪ್ರಾರ್ಥಿಸಿದರು. ಸತ್ಪುರುಷರು ಜನಗಳನ್ನು ಅನುಗ್ರಹಿಸುವುದಕ್ಕಾಗಿಯೇ ತೀರ್ಥಯಾತ್ರೆ ಮಾಡುತ್ತಾರೆಂದು ಹಿಂದೆ ಹೇಳಿರುತ್ತೇನೆ ಅಷ್ಟೇ. ಅದರಂತೆ ಲೋಕ ಹಿತಾರ್ಥವಾಗಿ ವರವನ್ನು ಬೇಡಿದರು. ಭೃಗುಮಹರ್ಷಿಗಳು ಸ್ತೋತ್ರ ಮಾಡಿದ ನಂತರ ಪ್ರಸನ್ನನಾದ ಕೇಶವನ್ನು ಭೃಗುಮಹರ್ಷಿಯನ್ನು ಕುರಿತು ಎಲೈ ಭೃಗುಮುನಿಯೇ ನಿನ್ನ ಈ ಸ್ತೋತ್ರದಿಂದ ನಾನು ಬಹಳ ಸಂತುಷ್ಟನಾಗಿದ್ದೇನೆ; ಮತ್ತು ನಿನ್ನ ತಪಸ್ಸಿನಿಂದ ಬಹಳ ಪ್ರೀತನಾದೆನು. ವರವನ್ನು ಕೇಳು ಕೊಡುತ್ತೇನೆ. ನಿನ್ನ ಮನಸ್ಸಿನ ಅಭಿಷ್ಟವನ್ನು ಹೇಳು ಎಮದು ಅಪ್ಪಣೆ ಕೊಡಿಸಲಾಗಿ, ಭೃಗುಮುನಿಯು ಭಗವದ್ಧರ್ಶನದಿಂದ ಮಹಾ ಭಾಗ್ಯಶಾಲಿಯಾಗಿ ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ ಸ್ವಾಮಿಯೇ ನೀನು ನನ್ನ ಈ ಚರ್ಮಚಕ್ಷುಸ್ಸಿಗೆ ಗೋಚರನಾದ ಕಾರಣ ಸಮಸ್ತವೂ ಪರಿಪೂರ್ಣವೇ ಆಗಿದೆ. ನಿನ್ನ ಸಂದರ್ಶನಕ್ಕಿಂತಲೂ ಪ್ರಾರ್ಥಿಸಿಕೊಳ್ಳುವೆನು. (ಸರ್ವಕಾರಣಗಳಿಗೂ ಕಾರಣಭೂತನಾದ ಜಗದೊಡೆಯನಾದ ಎಲೈ ದೇವ ದೇವನೆ ಕರುಣಾ ಸಮುದ್ರನೇ ಈ ಹೇಮಾವತಿಯ ತೀರದಲ್ಲಿ ಮನೋಹರವಾಗಿರುವ ಈ ಹೇಮಗಿರಿಯಲ್ಲಿ ಲಕ್ಷ್ಮಿದೇವಿಯೊಂದಿಗೆ ಸಾನಿಧ್ಯವನ್ನು ವಹಿಸಿ ಭಜಿಸುವ ಜನಗಳಿಗೆ ಅನುಗ್ರಹವನ್ನು ಮಾಡಬೇಕು. ಎಲೈ ಕೇಶವಸ್ವಾಮಿಯೇ ನಿನ್ನ ಸಾನಿಧ್ಯದಿಂದ ಈ ಪ್ರದೇಶದ ಸೌಂದರ್ಯವು ಇನ್ನೂ ಅಧಿಕವಾಗಿ ಅಲಂಕರಿಸಿದಂತೆ ಪ್ರಕಾಶಿಸಲಿ, ಅನಂತರದಲ್ಲಿ ಭಗವಂತನು ಎಲೈ ಭೃಗುಮುನಿಯೇ ಹಾಗೆಯೇ ಆಗಲಿ, ನಿನ್ನ ಸಂತೋಷಕ್ಕೇಸ್ಕರ ಈ ಹೇಮಗಿರಿಯಲ್ಲಿ ವಾಸಮಾಡುವೆನು, ಸಂದೇಹವಿಲ್ಲ, ನಾನಾಗಿಯೇ ನಿನಗೆ ಇನ್ನೂ ವರವನ್ನು ಕೊಡುತ್ತೇನೆ. ಈ ಹೇಮಾವತಿಯಲ್ಲಿ ಯಾವ ಮನುಷ್ಯನು ಭಕ್ತಿಯುಳ್ಳವನಾಗಿ ಸ್ನಾನ ಮಾಡಿ ಈ ಹೇಮಗಿರಿಯಲ್ಲಿ ನನ್ನನ್ನು ಸೇವಿಸುತ್ತಾನೆಯೋ ಅವನು ಸರ್ವಪಾಪ ಗಳಿಂದಲೂ ಬಿಡಲ್ಪಡುತ್ತಾನೆ.

ಮಾಘಶುದ್ಧ ಸಪ್ತಮಿಯಲ್ಲಿ ಶ್ರದ್ಧೆಯೊಡಗೂಡಿ ಪ್ರಾತಃಕಾಲದಲ್ಲಿ ಈ ಹೇಮಾವತಿನದಿಯಲ್ಲಿ ಯಾರು ಸ್ನಾನಮಾಡುತ್ತಾರೆಯೋ ಅವರಿಗೆ ಪುಣ್ಯ ಫಲವು ಅತಿಶಯವಾಗಿ ಉಂಟಾಗುತ್ತದೆ. ಅಂಥಾ ಮನುಷ್ಯನು ಸರ್ವಪಾಪಗಳಿಂದ ಬಿಡಲ್ಪಟ್ಟವನಾಗಿ ಪರಿಶುದ್ಧವಾದ ಮನಸ್ಸುಳ್ಳವನಾಗಿ ಸಂಸಾರಬಂಧನದಿಂದ ಬಿಡುಗಡೆ-ಯನ್ನು ಹೊಂದಿ ಇಹಲೋಕದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ದೇಹ ಅವಸಾನದಲ್ಲಿ ನನ್ನನ್ನು ಹೊಂದುವನು. ಯಾವ ಶಿಲಾತಲದ ಮೇಲೆ ನೀನು ತಪಸ್ಸು ಮಾಡಿ ನನ್ನನ್ನು ಸಂತೋಷಪಡಿಸಿದೆಯೋ, ಆ ಶಿಲೆಯು ಭೃಗುಶಿಲೆ ಎಂಬ

ಹೆಸರಿನಿಂದ ಈ ಭೂಮಿಯಲ್ಲಿ ಪ್ರಸಿದ್ಧಿಯನ್ನು ಹೊಂದುತ್ತದೆ. ಈ ಹೇಮಾವತಿಯಲ್ಲಿ ಸ್ನಾನಮಾಡಿ ಭೃಗುಶಿಲೆಯಲ್ಲಿ ಶ್ರದ್ಧೆಯಿಂದ ಜಪಮಾಡಿದರೆ ಅಂಥಾ ಮನುಷ್ಯನು ಬಹಳ ಶೀಘ್ರವಾಗಿ ಮನೋಹರವಾದ ಸಿದ್ಧಿಯನ್ನು ಹೊಂದುವನು. ಈ ಕ್ಷೇತ್ರವೂ ಕೂಡ ಭೃಗುಕ್ಷೇತ್ರವೆಂದು ಪ್ರಖ್ಯಾತಿಯನ್ನು ಹೊಂದುತ್ತದೆ. ಈ ಪ್ರಕಾರನಾಗಿ ಹೇಳಿ ಕ್ಲೇಶವನ್ನೆಲ್ಲವನ್ನೂ ಪರಿಹರಿಸುವ ಕೇಶವಸ್ವಾಮಿಯು ಆ ಪರ್ವತದಲ್ಲಿ ತನ್ನ ಕಲೆಯನ್ನು ನೆಲೆಗೊಳಿಸಿದನು.

ಈ ಪ್ರಕಾರವಾಗಿ ಲೋಕೋಪಕಾರಾರ್ಥವಾಗಿ ಭೃಗುಮಹರ್ಷಿಗಳು ನಾರಾಯಣ-ನನ್ನು ಆರಾಧಿಸಿ ಭಗವಂತನ ಸಾನ್ನಿಧ್ಯವನ್ನು ಈ ಪರ್ವತದಲ್ಲಿ ಕೇಳಿಕೊಂಡರು. ಕರುಣಾಸಮುದ್ರನಾದ ಕೇಶವನೂ ಕೂಡ ಭೃಗು ಮಹರ್ಷಿಗಳ ಮನೋರಥವನ್ನು ಸಫಲಗೊಳಿಸಿದನು.

ಎಲೈ, ಮಹಾಬುದ್ಧಿಶಾಲಿಯಾದ ಧರ್ಮರಾಯನೇ, ಈ ವಿಷಯದಲ್ಲಿ ಒಂದು ರಹಸ್ಯವನ್ನು ಹೇಳುವೆನು ಕೇಳು, ಲೋಕದಲ್ಲಿ ಎಷ್ಟು ಪುಣ್ಯತೀರ್ಥಗಳಿವೆಯೋ ಮತ್ತು ಬ್ರಾಹ್ಮಣಾದಿ ವರ್ಣಗಳು ಮತ್ತು ಬ್ರಹ್ಮಚಾರಾದ್ಯಾಶ್ರಮಗಳು ಇವುಗಳನ್ನು ಆಶ್ರಯಿಸಿರುವ ಯಾವ ಧರ್ಮಗಳುಂಟೋ, ಅವುಗಳೆಲ್ಲವೂ ವಿಷ್ಣುಭಕ್ತಿಯ ಒಂದು ಕಲೆಯ ಅಂಶಾಂಶಗಳಲ್ಲಿಯೂ ಹೋಲಿಕೆಯನ್ನು ಹೊಂದಲಾರವು. ಈ ಕಲಿಯುಗದಲ್ಲಿ ನಾರಾಯಣನನ್ನು ಪೂಜಿಸುವನು, ಧರ್ಮಭಾಜನನಾಗುವನು. ಭಕ್ತಪರಾಧೀನನಾಗಿ ಯಶೋಧೆಯಿಂದ ಹಗ್ಗದಿಂದ ಬಂಧಿಸುವ ಹಾಗೆ ಮಾಡಿಕೊಂಡ ಉದರವುಳ್ಳವನಾಗಿ ದಾಮೋದರನೆಂದು ಪ್ರಸಿದ್ಧಿಯನ್ನು ಹೊಂದಿರುವನಾಗಿಯೂ ಸರ್ವೇಂದ್ರಿಯಗಳಿಗೂ ಅಧೀಶ್ವರನಾಗಿಯೂ ವಿಶ್ವವ್ಯಾಪಿಯಾಗಿ ಎಲ್ಲಾ ಕಡೆಯೂ ವಾಸಮಾಡುವುದರಿಂದಲೂ ಎಲ್ಲವೂ ತನ್ನಲ್ಲಿಯೇ ವಾಸಮಾಡುವುದರಿಂದ ವಾಸುದೇವನೆಂದು ಪ್ರಸಿದ್ಧನಾಗಿಯೂ, ಶಾಂತನಾಗಿಯೂ ಇರುವ ಪುರಾಣ ಪುರುಷನಾದ ಪರಮಪುರುಷನನ್ನು ಹೃದಯದಲ್ಲಿ ಧ್ಯಾನದಿಂದ ಇರಿಸಿಕೊಂಡವನಿಂದ ಈ ಮೂರು ಲೋಕವೂ ಜಯಿಸಲ್ಪಟ್ಟಿತೆಂದು ತಿಳಿ.

ವಿಶೇಷವಾಗಿ ಬ್ರಾಹ್ಮಣರು ಪ್ರತ್ಯಕ್ಷವಾದ ವಿಷ್ಣುಸ್ವರೂಪನಾಗಿರುವರು. ಯಾರು ಅಂಥಾ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸುವರೋ ಅವರಿಗೆ ನಾರಾಯಣನು ಪ್ರಸನ್ನನಾಗುವನು. ಬ್ರಾಹ್ಮಣರ ಮುಖಕ್ಕೆ ಸಮರ್ಪಿಸಿದ ಮಧುರಪಧಾರ್ಥವೂ, ಬ್ರಾಹ್ಮಣರಿಗೆ ಮಾಡಿದ ಪೂಜೆಯೂ ಸಹ ಸಾಕ್ಷಾತ್ ಕೃಷ್ಣನ ಮುಖದಲ್ಲಿ ಅರ್ಪಿಸಲ್ಪಟ್ಟಿದ್ದಾಗಿ ಆಗುವುದಲ್ಲದೆ ಅದನ್ನೇ ನಾರಾಯಣನು ಸ್ವಯಂ ಭೋಜನ

ಮಾಡುವನು. ಬ್ರಾಹ್ಮಣರು ವಾಸ ಮಾಡುವುದರಿಂ ಭೂಮಿಯು ಧನ್ಯವಾದದ್ದೆಂದು ಶ್ಲಾಘಿಸಲ್ಪಡುತ್ತಲಿದೆ. ಬ್ರಾಹ್ಮಣರ ಹಸ್ತದಲ್ಲಿ ಸಮರ್ಪಿಸಿದ ಪದಾರ್ಥವು ನಾರಾಯಣನ ಹಸ್ತದಲ್ಲಿಯೇ ಸಮರ್ಪಿಸಲ್ಪಟ್ಟದಾಗಿ ಆಗುವುದು ಬ್ರಾಹ್ಮಣರುಗಳಿಗೆ ಮಾಡುವ ನಮಸ್ಕಾರಗಳಿಂದ ಪಾಪಗಳಿಗೆ ತಿರಸ್ಕಾರವುಂಟಾಗುವುದು. ಹಸಿದಿರುವ ಬ್ರಾಹ್ಮಣನ ವದನದಲ್ಲಿ ಸ್ವಲ್ಪದಾನ ಮಾಡಿದಾಗ್ಯೂ ಪರಲೋಕದಲ್ಲಿ ಅಥವಾ ಮನುಷ್ಯನು ಕೋಟಿ ಕಲ್ಪಗಳವರೆಗೂ ಅಮೃತಧಾರೆಗಳಿಂದ ಸೇವನೆ ಮಾಡಲ್ಪಡುತ್ತಾನೆ. ಬ್ರಾಹ್ಮಣರ ಮುಖವೆಂದರೆ ಚಾಳಲ್ಲದ ನಿಷ್ಕಂಟಕವಾದ ಶ್ರೇಷ್ಠವಾದ ಗದ್ದೆ ಎಂದು ತಿಳಿಯಬೇಕು.

ಈ ಕ್ಷೇತ್ರದಲ್ಲಿ ಸ್ವಲ್ಪ ಬಿತ್ತದಾಗ್ಯೂ ಕೋಟಿ ಕೋಟಿಯಷ್ಟು ಫಲವುಂಟಾಗುವುದು. ಪುರಾಣವೆಂದರೆ ಪುಣ್ಯ ತೀರ್ಥಗಳೊಳಗೆ ಶ್ರೇಷ್ಠವಾದ ಪುಣ್ಯತೀರ್ಥವೆನಿಸುವುದು. ಇದರಲ್ಲಿ ಒಂದು ಪಾದವನ್ನು ಶ್ರವಣಮಾಡಿದಾಗ್ಯೂ ನಾರಾಯಣನು ಪ್ರಸನ್ನನಾಗುವನು. ಬ್ರಾಹ್ಮಣನು ಸಾಕ್ಷಾದ್ವಿಷ್ಣು ಸ್ವರೂಪದವನು. ಪುರಾಣವು ಸಹ ಅಂಥಾದ್ದೇ ಆಗಿರುವುದು. ಇವೆರಡರ ಸಂಬಂಧವನ್ನು ಹೊಂದಿದ ಮನುಷ್ಯನು ಹರಿಯೇ ಆಗುವನು. ಪಾಪ–ಗಳೆಂಬ ಮೊಸಳೆಗಳಿಂದ ಕೂಡಿದಂತಾಗಿಯೂ, ವಿಷಯಗಳೆಂಬ ಸುಳಿಗಳಿಂದಲೂ, ದುಷ್ಟಜ್ಞಾನವೆಂಬ ನೊರೆಗಳಿಂದಲೂ, ಕೂಡಿ ದುಷ್ಟಜನರೆಂಬ ಕ್ರೂರಜಂತುಗಳಿಂದ ಮಹಾಭಯಂಕರವಾಗಿ ದಾಟುವುದಕ್ಕೆ ಅಸಾಧ್ಯವಾದ ಕಲಿಕಾಲವೆಂಬ ಸಮುದ್ರವನ್ನು ವಿಷ್ಣುಭಕ್ತಿಯೆಂಬ ತೆಪ್ಪದಲ್ಲಿ ಇರುವವರು ದಾಟಿಯೇ ದಾಟುವನು. ಭಕ್ತವತ್ಸಲವಾದ ನಾರಾಯಣನು ಯಾವ ಕರ್ಮಗಳನ್ನು ಮಾಡಬೇಕಾಗಿಲ್ಲದ ಕಾರಣ ನಿಷ್ಕೃತನಾದಾಗ್ಯೂ ಕಥಾಶ್ರವಣ ಮಾಡುವವರ ಹಿತಾರ್ಥವಾಗಿ ನಾನಾವಿಧವಾದ ಕಾರ್ಯಗಳನ್ನು ಮಾಡಿದನು. ಬುದ್ಧಿಶಾಲಿಯಾದವನು, ಮನುಷ್ಯನು ಎಲ್ಲಿಂದ ಬಂದನು? ಪುನಃ ಎಲ್ಲಿ ಹೋಗಿ ಸೇರುವನು? ಎಂಬೀತ್ಯಾದಿ ವಿಷಯಗಳನ್ನು ಪರ್ಯಾಲೋಚಿಸಿ.

ಧರ್ಮವನ್ನು ಸಂಗ್ರಹಿಸಬೇಕು. ನಾನಾವಿಧವಾದ ನರಕಯಾತನೆಗಳನ್ನು ಅನುಭವಿಸಿ ಅಲ್ಲಿಂದ ಬಿಡುಗಡೆಯನ್ನು ಹೊಂದಿದವನಾದರೆ ಸಾವರಾದಿ ಜನ್ಮಗಳನ್ನು ಹೊಂದುತ್ತಾನೆ. ಅದರೊಳಗೆ ದೈವಯೋಗದಿಂದ ಮನುಷ್ಯ ಜನ್ಮವು ದೊರೆತರೆ ಪ್ರಥಮದಲ್ಲಿ ಗರ್ಭವಾಸವೇ ಬಹಳ ಕಷ್ಟವು. ಅದರಿಂದಲೂ ಕರ್ಮವಶದಿಂದ ಭೂಮಿಯಲ್ಲಿ ಹುಟ್ಟಿದರೆ ಅಯ್ಯಾ ರಾಜನೇ, ಬಾಲ್ಯದಲ್ಲಿ ಬಹು ದೋಷಗಳಿಂದ ತೊಂದರೆಪಡುತ್ತಾನೆ. ಯೌವನದಲ್ಲೂ ಸಹ ಬಡತನದಿಂದಲೋ ಅಥವಾ ಅಸಾಧ್ಯವಾದ ರೋಗಗಳಿಂದಲೋ ಅಥವಾ ಅನಾವೃಷ್ಟಿಯೋ ಮೊದಲಾದವು–ಗಳಿಂದಲೋ ಬಹಳ ಕಷ್ಟಗಳನ್ನನುಭವಿಸುತ್ತಾನೆ.

ಮುಪ್ಪಿನಿಂದಲೂ ಕೂಡ ಇಲ್ಲಿ ಅಲ್ಲಿ ಹೇಳುವುದಕ್ಕಾಗದ ಕಷ್ಟಗಳನ್ನು ಅನುಭವಿಸುತ್ತಾನೆ. ಅನಂತರ ಮನಸ್ಸಿನ ಚಾಂಚಲ್ಯದಿಂದಲೂ ವಾಧಿಯಿಂದಲೂ ಸಾವನ್ನು ಹೊಂದುವನು. ಆ ಮರಣಕಾಲದಲ್ಲಿ ಉಂಟಾಗುವ ದುಃಖಕ್ಕಿಂತಲೂ ಅಧಿಕವಾಗಿ ಸಂಸಾರದಲ್ಲಿ ಅನುಭವಿಸುವುವು. ಇದರ ಮೇಲೆ ಪ್ರಾಣಿಯು ತನ್ನ ಕರ್ಮಾನುಸಾರವಾಗಿ ಯಮಲೋಕದಲ್ಲಿ ನರಕಯಾತನೆಯನ್ನೂ ಅನುಭವಿಸುತ್ತಾ, ಅದಾದನಂತರ ಪುನಃ ಭೂಮಿಯಲ್ಲಿ ಹುಟ್ಟುತ್ತಾನೆ. ಹೀಗೆ ಹುಟ್ಟುವುದು, ಸಾಯುವುದೂ ಸಾಯುವುದು, ಹುಟ್ಟುವುದು. ಈ ಪರಂಪರೆಯು ಯಾವಾಗಲೂ ತಪ್ಪುವುದೇ ಇಲ್ಲ. ನಾರಾಯಣನ ಚರಣಾರವನ್ನು ಆರಾಧಿಸದೆ ಇರುವ ಮನುಷ್ಯನ ಅವಸ್ಥೆಯು ಹೀಗೆಯೇ ಸರಿ. ಆಯಾಸವಿಲ್ಲದೆ ಸಾಯುವುದೂ, ಆಯಾಸವಿಲ್ಲದೆ ಜೀವಿಸುವುದೂ, ಸಹ ನಾರಾಯಣನ ಪಾದಸೇವೆಯನ್ನು ಮಾಡದೇ ಇರುವವನಿಗೆ ದೂರೆಯುವುದಿಲ್ಲವೇ, ಮನೆಯಲಲಿ ಧನವಿದ್ದರೆ ಅದನ್ನು ಕಾಪಾಡುವುದರಿಂದ ಫಲವೇನು? ಇವನು ಯಮಭಟರಿಂದ ಎಳೆಯಲ್ಪಡುವಾಗ ದ್ರವ್ಯವೇನಾದರೂ ಅನುಸರಿಸಿ ಬರುವುದೇ? ಆದಕಾರಣ ದ್ರವ್ಯವನ್ನು ಬಚ್ಚಿಡದೆ ಬ್ರಾಹ್ಮಣರನ್ನು ಸತ್ಕರಿಸುವುದರಲ್ಲಿ ವಿನಿಯೋಗಿಸಿದರೆ ಸರ್ವವಿಧವಾದ ಸೌಖ್ಯವನ್ನು ಉಂಟುಮಾಡುತ್ತದೆ. ಗಾನವು ಸ್ವರ್ಗಕ್ಕೆ ಸೋಪಾನರೂಪವಾದದ್ದು. ದಾನವು ಪಾಪವನ್ನು ಹೋಗ-ಲಾಡಿಸುವುದು. ನಾರಾಯಣನನ್ನು ಭಕ್ತಿಯಿಂದ ಭಜಿಸುವುದು ಮಹಾಪುಣ್ಯಕರ ವಾದದ್ದು. ಮನುಷ್ಯನಲ್ಲಿ ದ್ರವ್ಯವಿದ್ದರೆ ವ್ಯರ್ತವ್ಯಯ ಮಾಡಬಾರದು, ಇರುವುದನ್ನು ಭಗವಂತನಿಗೆ ಅರ್ಪಣೆ ಮಾಡಬೇಕು ಕೃಷ್ಣಾರ್ಪಣವನ್ನಾಗಿ ಮಾಡಿದ್ದು ಕ್ಷೇಮ-ವನ್ನುಂಟುಮಾಡುವುದು. ಇತರಾರ್ಪಣವು ಸೌಖ್ಯವನ್ನುಂಟು ಮಾಡುವುದಿಲ್ಲವು. ಈ ಕಣ್ಣುಗಳಿಂದ ವಿಷ್ಣುವಿನ ದಿವ್ಯಗ್ರಹಗಳನ್ನೇ ನೋಡಿ ಚಕ್ಷುರಿಂದ್ರಿಯವನ್ನು ಸಾರ್ಥಕ-ಗೊಳಿಸಬೇಕು, ಕಿವಿಗಳಿಂದ ರಾತ್ರಿ ಹಗಲೂ ಶ್ರೀಕೃಷ್ಣಗೆ ದಿವ್ಯ ಗುಣಗಳನ್ನೂ ದಿವ್ಯನಾಮಗಳನ್ನೂ ಕೇಳಬೇಕು. ನಾಲಿಗೆಯಿಂದ ಬುದ್ಧಿಸಾಲಿಗಳಾದವರು ವಿಷ್ಣು-ಪಾದೋದಕವನ್ನು ಅರ್ಪಿಸಿದ ತುಲಸೀದಳವನ್ನು ಆಘ್ರಾಣಮಾಡಬೇಕು. ಮನಸ್ಸಿನಿಂದ ಆ ಭಗವಂತನ ಪಾದಗಳನ್ನು ಧ್ಯಾನ ಮಾಡಬೇಕು. ಹೀಗೆ ಮಾಡುವುದರಿಂದ ಕೃತಾರ್ಥನಾಗುತ್ತಾನೆ. ಸಂದೇಹವಿಲ್ಲದೆ ಮನಸ್ಸಿಂದ ಧ್ಯಾನಮಾಡಿದ ಮಂತ್ರದಿಂದಲೇ ತನ್ನ ಸ್ಥಾನವನ್ನೇ ದಯಪಾಲಿಸುವ ಆದ್ಯಂತರಹಿತನಾದ ನಾರಾಯಣನನ್ನು ಯಾರು ತಾನೇ ಸೇವಿಸಲಾರರು. ನಾರಾಯಣನ ಪಾದಕಮಲದಲ್ಲಿ ಯಾವ ಮನಸ್ಸನ್ನು

ನಿಶ್ಚಲವಾದ ಮನಸ್ಸುಳ್ಳವನಾಗಿ ಆ ಭಗವಂತನ ಪ್ರೀತಿಗೋಸ್ಕರ ಯಥಾಶಕ್ತಿ ದಾನಮಾಡುವಂಥವನಾಗಿಯೂ ಆ ಭಗವಂತನ ಚರಣಯುಗಳದಲ್ಲಿ ನಮಸ್ಕಾರ ಮಾಡುವ ಬುದ್ಧಿಯಲ್ಲಿಯೇ ಆಸಕ್ತಿಯನ್ನಿಟ್ಟಿರುವಂಥವನಾಗಿಯೂ ಆಗುತ್ತಾನೆಯೋ ಅಂಥಾ ಮನುಷ್ಯನು ಇಹಲೋಕದಲ್ಲಿ ಪರಮಪೂಜ್ಯನೆನಿಸುವನು.

ಈ ರೀತಿ ವಾಲ್ಮೀಕಿ ಮಹಾಪುರಾಣದ ಸ್ವರ್ಗಖಂಡದ ತೀರ್ಥಮಹಾತ್ಮ್ಯ ಪ್ರಕರಣದಲ್ಲಿ ಭೃಗುಕ್ಷೇತ್ರ (ಹೇಮಗಿರಿ) ಮಹಾತ್ಮೆ ಮೂಡಿಬಂದಿದೆ.

# ಅಧ್ಯಾಯ – ೫

# ಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಹೇಮಗಿರಿ ಸುತ್ತಮುತ್ತಲಿನ ಜನಸಮುದಾಯ

ಹೇಮಗಿರಿ ಕ್ಷೇತ್ರವು ಹೇಮಾವತಿ ನದಿ ದಂಡೆಯ ಬಳಿಯಿರುವ ಒಂದು ಪುಣ್ಯಕ್ಷೇತ್ರವಾಗಿದೆ. ಪ್ರಶಾಂತವಾದ ಪ್ರಕೃತಿಯ ನೋಟವೇ ಈ ಗ್ರಾಮದ ವೈಶಿಷ್ಟ್ಯವಾಗಿದೆ. ಈ ಸ್ಥಳದ ಸುತ್ತ–ಮುತ್ತಲು ಕುಪ್ಪಳ್ಳಿ, ಬಂಡಿಹೊಳೆ, ನಾಟನಹಳ್ಳಿ, ಲಕ್ಷ್ಮೀಪುರ ಮತ್ತು ಬೆಳ್ಳಿಬೆಟ್ಟದ ಕಾವಲ್ ಎಂಬ ಗ್ರಾಮಗಳಿದ್ದು ವಿವಿಧ ಜನಾಂಗಗಳ ಜನರು ವಾಸಿಸುತ್ತಿದ್ದಾರೆ. ಒಂದು ಗ್ರಾಮ ಎಂದ ಮೇಲೆ ಹಲವು ಜಾತಿಯ ಜನಾಂಗದವರು ವಾಸಿಸುವುದು ತಿಳಿದ ವಿಷಯವಾಗಿದೆ. ಈ ವಿಷಯದಲ್ಲಿ ಇಲ್ಲಿನ ಗ್ರಾಮಗಳು ಸಹ ಹೊರತಾಗಿಲ್ಲ. ಒಂದು ಕ್ಷೇತ್ರವನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸುವಾಗ ಅಲ್ಲಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಕ್ಷೇತ್ರದ ಸಾಮಾಜಿಕ ಮತ್ತು ಧಾರ್ಮಿಕ ಅಧ್ಯಯನ ಮಾಡುವುದು ಬಹಳ ಮುಖ್ಯವಾಗಿದೆ. ಏಕೆಂದರೆ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯ ಪರಿಚಯ, ಸಾಂಸ್ಕೃತಿಕ ಅಧ್ಯಯನದಲ್ಲಿ ಗಮನಾರ್ಹವಾದ ಒಂದು ಭಾಗವಾಗಿದೆ. ಸಾಮಾಜಿಕ ಮತ್ತು ಧಾರ್ಮಿಕ ಚೌಕಟ್ಟಿನಲ್ಲಿ ಬರುವ ವಿಚಾರಗಳಲ್ಲಿ ಸಂಸ್ಕೃತಿಯನ್ನೇ ಅವಲಂಬಿಸುವುದರಿಂದ ಸಾಮಾಜಿಕ ಮತ್ತು ಧಾರ್ಮಿಕ ಅಧ್ಯಯನ ಸಾಂಸ್ಕೃತಿಕ ಅಧ್ಯಯನಕ್ಕೆ ಬಹಳ ಪೂರಕವಾಗಿದೆ. ಈ ನಿಟ್ಟಿನಲ್ಲಿ ಹೇಮಗಿರಿ ಕ್ಷೇತ್ರವನ್ನು ಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಅಧ್ಯಯನ ಮಾಡುವುದು ಮಹತ್ವಪೂರ್ಣವೆನಿಸುವುದು.

**ಜಾತಿಪದ್ಧತಿ:** ಹೇಮಗಿರಿ ಕ್ಷೇತ್ರದ ಸುತ್ತ–ಮುತ್ತಲಿನ ಗ್ರಾಮಗಳಲ್ಲಿ ಇರುವ ಜನಾಂಗದ ಬಗ್ಗೆ ನೋಡುವುದಾದರೆ ಇಲ್ಲಿ ಬ್ರಾಹ್ಮಣರು, ಒಕ್ಕಲಿಗರು, ಗಾಣಿಗಶೆಟ್ಟರು, ಮಡಿವಾಳಶೆಟ್ಟರು, ವಡ್ಡರು, ಈಡಿಗರು, ಆಚಾರರು, ಕಮ್ಮಾರರು, ಚಮ್ಮಾರರು, ನಾಯಕರು, ಲಿಂಗಾಯಿತರು, ಮಾದಿಗರು ಮೊದಲಾದ ಜನಾಂಗದವರು ಕಂಡುಬರುತ್ತಾರೆ. ಇಲ್ಲಿ ಬೇರೆ ಬೇರೆ ಜಾತಿಗಳಿದ್ದಾಗ್ಯೂ ಎಲ್ಲ ಜಾತಿಯವರು ಅನ್ಯೋನ್ಯವಾಗಿದ್ದಾರೆ. ಇಲ್ಲಿ ಒಂದೊಂದು ಜನಾಂಗದವರಿಗೂ ಒಂದೊಂದು ಬೀದಿಗಳಿದ್ದಾಗ್ಯೂ ಐಕ್ಯತಾಮನೋಭಾವ ತುಂಬಿ ತುಳುಕಾಡುತ್ತಿದೆ. ತಮ್ಮ ತಮ್ಮ ಜಾತಿಗಳಿಗನುಸಾರವಾಗಿ ಎಲ್ಲಾ ಸಾಮಾಜಿಕ ಕಾರ್ಯಗಳಲ್ಲಿ ನಿರತರಾಗಿರುತ್ತಾರೆ.

**ಆಹಾರಪದ್ಧತಿ:** ಇಲ್ಲಿನ ಜನಸಮುದಾಯಗಳಲ್ಲಿ ಬ್ರಾಹ್ಮಣರು, ಲಿಂಗಾಯಿತರುಗಳು ಶಾಕಾಹಾರಿಗಳಾ(ಸಸ್ಯಾಹಾರಿ)ಗಿದ್ದರೆ ಒಕ್ಕಲಿಗರು, ಕುರುಬರು, ಮಡಿವಾಳರು, ಗಾಣಿಗರು ಮಾಂಸಾಹಾರಿಗಳಾಗಿದ್ದು ಕುರಿ, ಕೋಳಿ, ಹಂದಿ ಕೋಣ ಮೊದಲಾದಂತಹ ಪ್ರಾಣಿಗಳನ್ನು ಮಾಂಸಾಹಾರಕ್ಕೆ ಬಳಸುತ್ತಾರೆ. ಬ್ರಾಹ್ಮಣರು ಊಟಕ್ಕೆ ಸಾಮಾನ್ಯವಾಗಿ ಬಾಳೆ ಎಲೆಯನ್ನು ಬಳಸುತ್ತಾರೆ. ಇವರು ಏಕಾದಶಿಯಂದು ಉಪವಾಸವಿರುವುದು ವಾಡಿಕೆಯಾಗಿದೆ. ಕೆಲವರು ಪೂರ್ಣದಿನವೂ ಅನ್ನಮಾತ್ರ ಊಟಮಾಡುವುದಿಲ್ಲ.

ಬ್ರಾಹ್ಮಣರು ಕೆಲವು ಆಹಾರಗಳನ್ನು ಸೇವಿಸುವುದಿಲ್ಲ. ಅವುಗಳನ್ನು ಎರಡು ರೀತಿಯಲ್ಲಿ ಕಾಣಬಹುದು. ವಾಸನೆ ವರ್ಜ್ಯ, ಮತ್ತೊಂದು ವರ್ಣ ವರ್ಜ್ಯ. ವಾಸನೆ ವರ್ಜ್ಯ ಎಂದರೆ ಈರುಳ್ಳಿ ಹಾಗೂ ಬೆಳ್ಳುಳ್ಳಿಯನ್ನು ಅರೆದರೆ ವಾಸನೆ ಬರುವುದರಿಂದ ವಾಸನೆ ವರ್ಜ್ಯಾ ಆಹಾರವೆಂದು ಇವುಗಳನ್ನು ಯಾವ ಹಂತದಲ್ಲೂ ಇವರು ಬಳಸದಿರುವುದು ವಿಶೇಷವಾಗಿದೆ. ವರ್ಣವರ್ಜ್ಯ ಎಂದರೆ ಕ್ಯಾರೆಟ್, ಬೀಟ್‌ರೂಟ್, ಟೊಮೊಟೋಗಳು ಕೆಂಪುಬಣ್ಣದ್ದಾಗಿದ್ದು ರಕ್ತದ ಬಣ್ಣವಿರುವುದರಿಂದ ಸೇವಿಸುವುದಿಲ್ಲ. ಅಂತೆಯೇ ಮಜ್ಜಿಗೆ ಇಲ್ಲದೆ ಇವರು ಊಟ ಮಾಡುವುದಿಲ್ಲ. ಉಳಿದಂತೆ ಇಲ್ಲಿನ ಎಲ್ಲಾ ಜನಾಂಗದವರು. ಶ್ರಮಜೀವಿಗಳಾಗಿದ್ದು ವ್ಯವಸಾಯವನ್ನು ಕೈಗೊಳ್ಳುವುದರಿಂದ ಮುಂಜಾನೆಯ ಉಪಾಹಾರಕ್ಕೆ ರೊಟ್ಟಿ, ಇಡ್ಲಿ, ದೋಸೆ, ಚಪಾತಿಯನ್ನು ಮತ್ತು ಮಧ್ಯಾಹ್ನ, ರಾತ್ರಿ ಊಟಕ್ಕೆ ರಾಗಿಮುದ್ದೆ ಮತ್ತು ಅನ್ನವನ್ನು ಬಳಸುತ್ತಾರೆ.

**ಉಡುಗೆ-ತೊಡುಗೆ**

ಇಲ್ಲಿನ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಉಡುಗೆ-ತೊಡುಗೆಗಳು ಬೇರೆ ಬೇರೆ ರೀತಿಯಾಗಿವೆ. ಬ್ರಾಹ್ಮಣ ಗಂಡಸರು ಪಂಚೆ, ಶಲ್ಯ, ಧೋತಿ ಸಾಮಾನ್ಯವಾಗಿ ತೊಡುತ್ತಾರೆ. ಕಚ್ಚೆ ಪಂಚೆ ಕಟ್ಟುವುದು ಹೆಚ್ಚು ರೂಢಿಯಲ್ಲಿದೆ. ಹೆಚ್ಚಾಗಿ ಬಿಳಿಬಣ್ಣದ ವಸ್ತ್ರಗಳನ್ನು ಧರಿಸುವುದು ಇವರ ವಾಡಿಕೆಯಾಗಿದೆ. ಅದೇ ರೀತಿ ಮಹಿಳೆಯರು ಕೂಡ ಹೆಚ್ಚಾಗಿ ಸೀರೆ ಧರಿಸುತ್ತಾರೆ. ಆಧುನಿಕತೆಯ ಕಾರಣದಿಂದಾಗಿ ಪಾಶ್ಚಾತ್ಯ ಮಾದರಿಯ ಉಡುಪುಗಳನ್ನು ಧರಿಸುತ್ತಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಇಲ್ಲಿನ ಎಲ್ಲಾ ಬ್ರಾಹ್ಮಣರು ಜನಿವಾರವನ್ನು ಹಾಕುತ್ತಾರೆ. ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ಜನಾಂಗದವರ ಉಡುಗೆ ತೊಡುಗೆಗಳಲ್ಲಿ ವೈಶಿಷ್ಟ್ಯವೇನೂ ಕಂಡುಬರುವುದಿಲ್ಲ. ಆದರೆ ಇವರೆಲ್ಲಾ ವ್ಯವಸಾಯಕ್ಕೆ ಯೋಗ್ಯವಾದಂತಹ ಉಡುಗೆ ತೊಡುವುದನ್ನು ಸಾಮಾನ್ಯವಾಗಿ

ಕಾಣಬಹುದು. ವಿಶೇಷ ಸಂದರ್ಭಗಳಲ್ಲಿ ಷರ್ಟು, ಪ್ಯಾಂಟುಗಳನ್ನು ಧರಿಸುತ್ತಾರೆ. ವಿದ್ಯಾವಂತರೆಲ್ಲಾ ಆಧುನಿಕ ರೀತಿಯ ವಿವಿಧ ಉಡುಗೆಗಳನ್ನು ಧರಿಸುತ್ತಿದ್ದಾರೆ. ಅಂತೆಯೇ ಸ್ತ್ರೀಯರು ಕೂಡ ಸೀರೆಯಿಂದ ದೂರವಾಗುತ್ತಾ ಚೂಡಿದಾರ್, ಮಿಡ್ಡಿ, ನೈಟಿಗಳು, ಜೀನ್ಸ್‌ಪ್ಯಾಂಟ್‌ಗಳು, ಟಾಪ್‌ಗಳಂತ ಉಡುಪುಗಳನ್ನು ವಿಶೇಷದಿನ/ಕಾರ್ಯಕ್ರಮ ಗಳಲ್ಲಿ ಧರಿಸಲು ಪ್ರಾರಂಭಿಸಿದ್ದಾರೆ

**ಹಬ್ಬಗಳು:**

ಹಬ್ಬಗಳು ಆಯಾ ಧರ್ಮಗಳ ಸಂಸ್ಕೃತಿಯ ಪ್ರತೀಕಗಳಾಗಿವೆ. ಹಿಂದೂಗಳಲ್ಲಿ ಹಬ್ಬಗಳಿಗೆ ತಮ್ಮದೇಯಾದಂತಹ ವಿಶೇಷವಾದ ಮಹತ್ವವಿದೆ. ಹಬ್ಬಗಳನ್ನು ಆಚರಿಸುವುದರಿಂದ ಪರಸ್ಪರ ಸ್ನೇಹ, ಬಾಂಧವ್ಯ ಬೆಳೆಯತೊಡಗುತ್ತದೆ. ಹೇಮಗಿರಿಯ ಸುತ್ತ-ಮುತ್ತಲಿನ ಗ್ರಾಮಗಳಲ್ಲಿ ಹಲವು ಹಬ್ಬಗಳನ್ನು ಆಚರಣೆ ಮಾಡಲಾಗುತ್ತದೆ. ಈ ಕ್ಷೇತ್ರದ ಜನತೆ ಆಚರಿಸುವ ಸಾಮಾನ್ಯ ಹಬ್ಬಗಳೆಂದರೆ ಯುಗಾದಿ, ಸಂಕ್ರಾಂತಿ, ದೀಪಾವಳಿ, ಗೌರಿ-ಗಣೇಶ, ಶಿವರಾತ್ರಿ, ರಾಮನವಮಿ, ಇವುಗಳಲ್ಲದೆ ಕೆಲವು ವಿಶೇಷ ಹಬ್ಬಗಳಾದ ಬಂಡಿಹಬ್ಬ, ಕನ್ನಂಬಾಡಿಯಮ್ಮನ ಹಬ್ಬ. ಗ್ರಾಮದೇವತೆಯ ಹಬ್ಬ, ಪಿತೃಪಕ್ಷದ ಹಬ್ಬ ಮೊದಲಾದವುಗಳನ್ನು ಆಚರಣೆ ಮಾಡುತ್ತಾರೆ.

**ಯುಗಾದಿ ಹಬ್ಬ:** ಹಿಂದೂಗಳಿಗೆ ವರ್ಷದ ಆರಂಭವೇ ಈ ಚಾಂದ್ರಮಾನ ಯುಗಾದಿ. ಈ ಹಬ್ಬವನ್ನು ಎಲ್ಲಾ ವರ್ಗದವರು ಬಹಳ ವಿಜೃಂಭಣೆಯಿಂದ ಆಚರಣೆ ಮಾಡುತ್ತಾರೆ. ಅಂದು ಮುಂಜಾನೆ ಗಂಡಸರೆಲ್ಲಾ ಎದ್ದು ಮೈಗೆಲ್ಲಾ ಹರಳೆಣ್ಣೆಯನ್ನು ಹಚ್ಚಿ ಅನಂತರದಲ್ಲಿ ಸ್ನಾನಮಾಡಿ ಹೊಸ ಉಡುಪುಗಳನ್ನು ಧರಿಸುತ್ತಾರೆ. ಸಾಮಾನ್ಯವಾಗಿ ಎಲ್ಲರೂ ಅಂದೂ ತಮ್ಮ ಮನೆಗಳಲ್ಲಿ ಹೋಳಿಗೆ ಊಟವನ್ನು ತಯಾರು ಮಾಡುತ್ತಾರೆ. ರೈತರುಗಳೆಲ್ಲ ಹೊನ್ನಾರು ಕಟ್ಟುತ್ತಾರೆ. ಅಂದಿನ ದಿನ ಎಲ್ಲರೂ ಚಂದ್ರನನ್ನು ನೋಡಲು ಪ್ರಯತ್ನಿಸುವ ದೃಶ್ಯವನ್ನು ನಾವು ಕಾಣಬಹುದಾಗಿದೆ.

**ಸಂಕ್ರಾಂತಿಹಬ್ಬ:** ಜನವರಿ ತಿಂಗಳಿನ ಎರಡನೇ ವಾರದಾಂತ್ಯದಲ್ಲಿ ಬರುವ ಈ ಹಬ್ಬ ರೈತರಿಗೆ ಸುಗ್ಗಿಯ ಹಬ್ಬವೇ ಆಗಿದೆ. ಅಂದಿನ ದಿನ ರೈತರು ತಮ್ಮ ಹೊಲದ ಕೆಲಸವನ್ನೆಲ್ಲ ಮುಗಿಸಿ ವಿಶ್ರಾಂತಿಯನ್ನು ಪಡೆದುಕೊಳ್ಳುವ ಹಬ್ಬವಾಗಿದೆ. ಹೆಣ್ಣುಮಕ್ಕಳು ಎಳ್ಳು, ಬೆಲ್ಲ, ಕಬ್ಬು, ಜೀರಿಗೆಯನ್ನು ಹೊಸವಸ್ತ್ರಗಳನ್ನು ಧರಿಸಿಕೊಂಡು ಅಲಂಕಾರ-

ಗೊಂಡು ಪರಸ್ಪರ ಎಲ್ಲರ ಮನೆಗೂ ಕೊಡುವುದನ್ನು ಕಾಣಬಹುದಾಗಿದೆ. ಮಾಂಸಾಹಾರ ಬಳಸುವ ಮನೆಗಳಲ್ಲಿ ಸಂಕ್ರಾಂತಿ ಹಬ್ಬದ ಮೂರನೇ ದಿನ ಮಾಂಸಾಹಾರದ ಊಟವನ್ನು ಏರ್ಪಡಿಸಿ ಎಲ್ಲರೂ ಮನೆಯಲ್ಲಿ ಊಟಮಾಡುತ್ತಾರೆ. ಸಂಜೆಯ ವೇಳೆಗೆ ದನಕರುಗಳನ್ನೆಲ್ಲಾ ನೀರಿನಿಂದ ಸ್ನಾನಮಾಡಿಸಿ ಹುಲ್ಲಿಗೆ ರಸ್ತೆಯಲ್ಲಿ ಬೆಂಕಿಹಾಕಿ ದನಕರುಗಳನ್ನು ಅದರ ಮೇಲೆ ದಾಟಿಸುತ್ತಾರೆ. ಈ ಸಂದರ್ಭದಲ್ಲಿ ದನಕರುಗಳನ್ನು ಓಡಿಸುವ ಸ್ಪರ್ಧೆಯು ನಡೆದಿರುತ್ತದೆ.

**ದೀಪಾವಳಿ ಹಬ್ಬ:** ಇದು 'ದೀಪಗಳ ಹಬ್ಬ', 'ಪಟಾಕಿಗಳ ಹಬ್ಬ' ಎಂದೇ ಪ್ರಸಿದ್ಧಿ ಪಡೆದಿದೆ. ಮಕ್ಕಳಿಗೆಲ್ಲಾ ಪ್ರಿಯವಾದ ಹಬ್ಬವೆಂದರೆ ದೀಪಾವಳಿ ಹಬ್ಬ. ಈ ಹಬ್ಬದಂದು ಮನೆಯ ಮುಂದೆ ಸುಂದರವಾಗಿ ರಂಗೋಲಿ ಬಿಡಿಸಿ ಅದರ ಮೇಲೆ ಚೆಂಡು ಹೂಗಳನ್ನಿಡುತ್ತಾರೆ. ಮನೆಮಂದಿಯವರೆಲ್ಲಾ ಹೊಸ ಬಟ್ಟೆಯನ್ನು ಧರಿಸುತ್ತಾರೆ. ಎಲ್ಲರ ಮನೆಗಳಲ್ಲೂ ನೂರಾರು ರೂಪಾಯಿಗಳ ಪಟಾಕಿಗಳನ್ನು ತಂದು ಸಿಡಿಸಿ ಸಂಭ್ರಮಪಡುತ್ತಾರೆ. ಸಾಮಾನ್ಯವಾಗಿ ಹೊಸದಾಗಿ ಮದುವೆಯಾದಂತಹ ಹೆಣ್ಣು ಈ ಹಬ್ಬದಲ್ಲಿ ತವರುಮನೆಗೆ ಬರುವುದು ರೂಢಿ. ದನಕರುಗಳಿಗೂ ಅಂದು ಮೈತೊಳೆದು ಕೊಂಬುಗಳಿಗೆ ಬಣ್ಣ ಹಚ್ಚಲಾಗುತ್ತದೆ. ಇನ್ನೂ ಕೆಲವರ ಮನೆಗಳಲ್ಲಿ ಈ ಅವಧಿಯಲ್ಲಿ ಧನಲಕ್ಷ್ಮಿ ಪೂಜೆಯನ್ನು ಇಟ್ಟುಕೊಂಡಿರುತ್ತಾರೆ.

**ಗೌರಿಗಣೇಶನ ಹಬ್ಬ:** ಈ ಹಬ್ಬದಂದು ಗೌರಿಗಣೇಶರ ಪ್ರತಿಮೆಗಳನ್ನು ಊರ ಮುಖ್ಯಸ್ಥಳದಲ್ಲಿ ಇಡಲಾಗುತ್ತದೆ. ಅದನ್ನು ಅಲಂಕಾರಗೊಳಿಸಿ ವಿಜೃಂಭಣೆಯಿಂದ ಪೂಜೆಯನ್ನು ಸಲ್ಲಿಸುತ್ತಾರೆ. ಕಡುಬಿನ ಊಟ ಅಂದೂ ವಿಶೇಷವಾಗಿ ಎಲ್ಲರ ಮನೆಯಲ್ಲಿ ತಯಾರಾಗಿರುತ್ತದೆ. ಅಂದು ಸಹ ಹೊಸ ಮದುಮಕ್ಕಳು ತವರು ಮನೆಗೆ ಬರುವುದು ರೂಢಿಯಾಗಿದೆ. ಗಣೇಶನನ್ನು ಭಕ್ತಿಯಿಂದ ಪೂಜಿಸಿ ಪಟಾಕಿ ಸಿಡಿಸಿ ರಸಸಂಜೆಯ ಕಾರ್ಯಕ್ರಮಗಳೊಂದಿಗೆ ಹೊಳೆಗೆ ಬಿಡಲಾಗುತ್ತದೆ.

**ಕನ್ನಂಬಾಡಿಯಮ್ಮನ ಹಬ್ಬ:** ಇಲ್ಲಿನ ಜನಸಮುದಾಯವು ಆಚರಣೆ ಮಾಡುವ ಹಬ್ಬಗಳಲ್ಲಿ ಈ ಹಬ್ಬ ವಿಶಿಷ್ಟವಾದ ಹಬ್ಬವಾಗಿದೆ. ಈ ಹಬ್ಬದ ಹಿಂದಿನ ದಿನದಂದು ಗ್ರಾಮಗಳಿಂದ ಕೆಲಜನರು ಕನ್ನಂಬಾಡಿಕಟ್ಟೆ ಗ್ರಾಮಕ್ಕೆ ತೆರಳುತ್ತಾರೆ. ಇದು ಶ್ರೀರಂಗಪಟ್ಟಣದ ಬಳಿಯಿರುವ ಗ್ರಾಮವಾಗಿದೆ. ಇಲ್ಲಿಗೆ ತೆರಳಿ ಕನ್ನಂಬಾಡಿಯಮ್ಮನ ದೇವಸ್ಥಾನದಲ್ಲಿ ದೇವಿಗೆ ಪೂಜೆ ಸಲ್ಲಿಸಿ ತಮ್ಮ ತಮ್ಮ ಗ್ರಾಮಗಳಿಗೆ ಹಿಂತಿರುಗಿ ಕನ್ನಂಬಾಡಿಯಮ್ಮನ ಹೆಸರಿನಲ್ಲಿ ಪ್ರಾಣಿಗಳನ್ನು ಬಲಿನೀಡಿ ಅಡುಗೆಮಾಡಿ

ಊಟಮಾಡುತ್ತಾರೆ. ಗಂಡಸರು-ಗಳೆಲ್ಲಾ ಸಾಮಾನ್ಯವಾಗಿ ಮಧ್ಯಸೇವನೆ ಮಾಡಿ ಊಟಮಾಡುತ್ತಾರೆ. ಬ್ರಾಹ್ಮಣರು ಮತ್ತು ಲಿಂಗಾಯಿತ ಸಮುದಾಯದವರು ಈ ಹಬ್ಬದಲ್ಲಿ ಪಾಲ್ಗೊಳ್ಳುವುದಿಲ್ಲ. ಇತರೇ ಜನಸಮುದಾಯಗಳಲ್ಲಿ ಮಹಿಳೆಯರು ತಮ್ಮ ತವರುಮನೆಗಳಿಗೆ ಹಬ್ಬಕ್ಕಾಗಿ ಬಂದಿರುತ್ತಾರೆ. ಅಲ್ಲದೆ ತಮಗೆ ಬೇಕಾದಂತಹ ನೆಂಟರಿಷ್ಟರನ್ನೆಲ್ಲಾ ಹಬ್ಬಕ್ಕೆ ಆಹ್ವಾನ ಮಾಡುತ್ತಾರೆ.

**ಬಂಡಿಹಬ್ಬ:** ಈ ಭಾಗದಲ್ಲಿದು ವಿಶೇಷ ಹಬ್ಬವಾಗಿದೆ. ಈ ಹಬ್ಬವು ಐದು ವರ್ಷಗಳಿಗೊಮ್ಮೆ ಬಹಳ ವಿಜೃಂಭಣೆಯಿಂದ ಆಚರಣೆ ಮಾಡಲಾಗುತ್ತದೆ. ಊರಿನ ಹೊರಭಾಗದಲ್ಲಿರುವ ಗ್ರಾಮದೇವತೆಗಳಿಗೆ ಪ್ರಸಾದವನ್ನು ಬಂಡಿಯಲ್ಲಿ ನೈವೇದ್ಯಕ್ಕೆಂದು ತೆಗೆದುಕೊಂಡು ಹೋಗುವುದರಿಂದ ಅದಕ್ಕೆ 'ಬಂಡಿಹಬ್ಬ' ಎಂದು ಕರೆಯಲಾಗುತ್ತದೆ.

ಸಾಮಾನ್ಯವಾಗಿ ಯುಗಾದಿ ಹಬ್ಬವಾದ ಅನಂತರದ ದಿನಗಳಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬಕ್ಕೆಂದು ತವರು ಮನೆಗೆ ಎಲ್ಲಾ ಹೆಣ್ಣುಮಕ್ಕಳು ಬರುತ್ತಾರೆ. ಈ ಹಬ್ಬದಲ್ಲಿ ಬ್ರಾಹ್ಮಣರು, ಲಿಂಗಾಯಿತರು ಸಹ ಪಾಲ್ಗೊಂಡು ಯಜ್ಞ, ಹೋಮಗಳನ್ನು ಬ್ರಾಹ್ಮಣರು ನಡೆಸಿಕೊಡುತ್ತಾರೆ. ಗ್ರಾಮದೇವತೆಯ ಮೂರ್ತಿಯನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿ ಪೂಜೆ ಮಾಡಲಾಗುತ್ತದೆ. ಈ ಹಬ್ಬದಲ್ಲಿ ಮಾಂಸದೂಟ ಸಾಮಾನ್ಯವಾಗಿರುತ್ತದೆ. ಮನೆಗೆ ಎರಡು-ಮೂರು ಅಂತ ಅವರವರ ಸಾಮಾರ್ಥ್ಯಕ್ಕನು-ಗುಣವಾಗಿ ಮರಿಗಳನ್ನು ಕೊಯ್ದು ಮಾಂಸದ ಅಡಿಗೆಮಾಡಿ ನೆಂಟರಿಷ್ಟರಿಗೆಲ್ಲಾ ಊಟಬಡಿಸುತ್ತಾರೆ. ಈ ಹಬ್ಬದ ದಿವಸದಂದು ಐದರಿಂದ ಆರಡಿಯಷ್ಟು ಉದ್ದಗಲದ ಗುಂಡಿಯಲ್ಲಿ ಕೊಂಡವನ್ನು ಹೊತ್ತಿಸುತ್ತಾರೆ. ಕೆಂಪಾಗಿ ರಾಶಿ-ರಾಶಿ ಕಾಣುವ ಈ ಕೆಂಡದಲ್ಲಿ ಹರಕೆ ಹೊತ್ತುಕೊಂಡಿರುವ ಜನರು ಬರಿಗಾಲಿನಲ್ಲಿ ಓಡುವುದು ನೋಡುಗರನ್ನು ಅಚ್ಚರಿಯುಂಟು ಮಾಡುತ್ತದೆ.

**ರಂಗದ ಹಬ್ಬ:** ಕುಪ್ಪಳ್ಳಿ ಗ್ರಾಮದಲ್ಲಿ ಬಹಳ ವಿಜೃಂಭಣೆಯಿಂದ ಆಚರಣೆ ಮಾಡಲಾಗುವ ವಿಶೇಷವಾದ ಹಬ್ಬವೇ ರಂಗದಹಬ್ಬವಾಗಿದೆ. ನವರಾತ್ರಿಗಳಲ್ಲಿ ದೀಪಗಳ ಅಲಂಕಾರ-ದೊಂದಿಗೆ ಹಬ್ಬದ ಆಚರಣೆ ನಡೆಯುತ್ತದೆ. ಆಂಜನೇಯಸ್ವಾಮಿ ವಿಗ್ರಹವನ್ನು ಪೂಜಿಸಿ ಅಂದೂ ಗಾದೆಮಾತುಗಳನ್ನು ಸಂಗೀತ ರೂಪದಲ್ಲಿ ಹಾಡುವುದರ ಮೂಲಕ ನೆರೆದಿರುವಂತಹ ಜನತೆಯನ್ನು ಮನರಂಜಿಸಲಾಗುತ್ತದೆ. ಸಂಗೀತದ ಕಚೇರಿಯನ್ನು ಸಹ ಏರ್ಪಡಿಸಲಾಗಿರುತ್ತದೆ. ನಾಟಕಗಳನ್ನು ಸಹ ಆಡಲಾಗುತ್ತದೆ. ಈ ಹಬ್ಬದಲ್ಲಿ

ಎಲ್ಲಾ ಜನಸಮುದಾಯದವರು ಪಾಲ್ಗೊಳ್ಳುವುದು ಮತ್ತೊಂದು ವಿಶೇಷವಾಗಿದೆ. ಈ ಹಬ್ಬದಲ್ಲಿ ಎಲ್ಲರ ಮನೆಗಳಲ್ಲೂ ಸಿಹಿತಿಂಡಿಗಳನ್ನೂ ಮಾಡಲಾಗಿರುತ್ತದೆ. ಈ ಗ್ರಾಮದವರು ತಮ್ಮ ನೆಂಟರಿಷ್ಟರನ್ನೆಲ್ಲಾ ದೂರದೂರದ ಗ್ರಾಮಗಳಿಂದ ಆಹ್ವಾನನೀಡಿ ಕರೆಸಿಕೊಂಡು ಜೊತೆಗೂಡಿ ಸಂತೋಷವನ್ನು ಹಂಚಿಕೊಂಡು ಹಬ್ಬವನ್ನು ಆಚರಣೆ ಮಾಡುತ್ತಾರೆ.

**ಪಿತೃಪಕ್ಷ:** ಇಲ್ಲಿನ ಜನಸಮುದಾಯದಲ್ಲಿ ಬ್ರಾಹ್ಮಣೇತರರು ಆಚರಿಸುವ ಹಬ್ಬವೇ ಪಿತೃಪಕ್ಷವಾಗಿದೆ. ತಮ್ಮ ಹಿರಿಕರು ಸತ್ತಿದ್ದು ಅಂತಹವರಿಗೆ ಈ ಹಬ್ಬದಲ್ಲಿ ಅವರಿಗಿಷ್ಟ-ವಾದಂತಹ ಅಡುಗೆಗಳನ್ನು ಮಾಡಿ ಎಡೆತೆಗೆದಿಟ್ಟು ಅನಂತರದಲ್ಲಿ ಎಲ್ಲರೂ ನೆಂಟರಿಷ್ಟರೆಲ್ಲಾ ಸೇರಿ ಊಟಮಾಡುತ್ತಾರೆ. ಮಾಂಸಾಹಾರದ ಅಡುಗೆಯು ಈ ಹಬ್ಬದಲ್ಲಿ ಸಾಮಾನ್ಯವಾಗಿರುತ್ತದೆ. ಹೀಗೆ ಇಲ್ಲಿನ ಜನಸಮುದಾಯವು ಈ ಮೇಲ್ಕಂಡ ಹಬ್ಬಗಳಲ್ಲದೆ ಖಾರಹಬ್ಬ, ಪಂಚಮಿ, ಶ್ರೀಕೃಷ್ಣಜನ್ಮಾಷ್ಟಮಿ, ತೋಪಿನಹಬ್ಬ ಮೊದಲಾದ ಹಬ್ಬಗಳನ್ನು ಆಚರಣೆ ಮಾಡುತ್ತಾರೆ.

**ಹೇಮಗಿರಿಜಾತ್ರೆ:** ಕರ್ನಾಟಕ ರಾಜ್ಯದ ಪ್ರಸಿದ್ಧ ದನಗಳ ಜಾತ್ರೆಯಲ್ಲಿ ಹೇಮಗಿರಿ ಜಾತ್ರೆಯು ಹೆಸರು ಪಡೆದಿದೆ. ಉತ್ತರಾಯಣದ ಪುಣ್ಯಕಾಲದ ಶುಭದಿನದಂದು ಹಳ್ಳಿಗಳಿಂದ ಬಂದಂತಹ ಜನತೆ, ದನಗಳ ಮಾಳಗಳಲ್ಲಿ ಹಂತಹಂತವಾಗಿ ನಿರ್ಮಿಸಲ್ಪಟ್ಟ ಮಣ್ಣಿನಿಂದ ಮತ್ತು ಕಲ್ಲಿನಿಂದ ಸೇರಿಸಿ ಕಟ್ಟಿದ್ದ ಗದ್ದೆಗಳು ಅಲ್ಲದೆ ಗುರುತುಕಲ್ಲುಗಳು ನೆಟ್ಟು ನಂತರದ ದಿನಗಳಲ್ಲಿ ಬರುತ್ತಾರೆ. ಈ ಗುರುತು ಕಲ್ಲುಗಳಿಗೆ ಸುಣ್ಣ ಬಳಿದು ನಿರ್ಮಿಸಿದ ಗುರುತು ಕಲ್ಲುಗಳು ತಳಿರುತೋರಣಗಳಿಂದ ಸ್ವಾಭವಿಕವಾಗಿ ನಿರ್ಮಿತವಾಗಿರುವ ಆಲದಮರ, ಗೋಣಿಯಮರ, ಬೇವಿನಮರ ಹಾಗೂ ಮಾವಿನಮರಗಳ ನಡುವೆ ಕಂಗೊಳಿಸುವ ಕಳಸದಂತೆ ಕಾಣುತ್ತದೆ. ಒಂದೆರಡು ಎತ್ತಿನ ಗಾಡಿಗಳು ಬಂದ ರಾತ್ರಿಯೊಳಗೆ ಬೆಳಗಾಗುವುದರಲ್ಲಿ ಹೋಟೆಲ್‌ಗಳು ಸಿಹಿತಿಂಡಿ ಅಂಗಡಿಗಳು ನಿರ್ಮಾಣ ಗೊಂಡಿರುತ್ತದೆ. ಕರ್ನಾಟಕ ರಾಜ್ಯದ ವಿವಿಧ ಮೂಲೆಗಳಿಂದ ದನಗಳನ್ನು, ಹೋರಿಗಳನ್ನು ಕೊಂಡುಕೊಳ್ಳಲು ಜನತೆ ಇಲ್ಲಿಗೆ ಧಾವಿಸುತ್ತಾರೆ. ಅದರಂತೆ ದನಗಳಿಗೂ ಬಹಳ ಬೇಡಿಕೆ ಬರುವುದರಿಂದ ವಿವಿಧ ಭಾಗಗಳ ಹಳ್ಳಿಗಳಿಂದ ಜನರು ದನಗಳನ್ನು ಪೂರ್ವತಯಾರಿಗೊಳಿಸಿ ಪುಷ್ಟಿದಾಯಕವಾಗಿರುವಂತೆ ಕಣ್ಣಿಗೆ ಕಂಗೊಳಿಸುವ ರೀತಿಯಲ್ಲಿ ಕಾಣುವಂತಾದ ದನಗಳನ್ನು ಇಲ್ಲಿಗೆ ಕರೆತರುತ್ತಾರೆ. ಸುಮಾರು ಒಂದು ತಿಂಗಳ ಕಾಲದವರೆಗೆ ಜಾತ್ರೆಯು ನಡೆಯುತ್ತಿತ್ತು. ಆದರೆ ಇತ್ತೀಚೆಗೆ

ಅದು ಕೇವಲ ಹತ್ತರಿಂದ-ಹನ್ನೆರಡು ದಿನಗಳು ಮಾತ್ರ ನಡೆಯುತ್ತಿದೆ. ಇಲ್ಲಿನ ಹೋರಿ ಮಾಳದಲ್ಲಿ ಭಾರಿ ದನಗಳ ಜಾತ್ರೆ ಎರಡು ಮೈಲಿ ವಿಸ್ತೀರ್ಣದ ಗೋಮಾಳದಲ್ಲಿ ಭಾರಿ ದನಗಳ ಜಾತ್ರೆ ಸೇರುತ್ತದೆ. ಈ ಜಾತ್ರೆಯಲ್ಲಿ ರಾಸುಗಳ ಪ್ರದರ್ಶನ ಕೊಂಡುಕೊಳ್ಳುವ ವ್ಯಾಪಾರ ವಹಿವಾಟು ಬಹುರಂಜನೀಯ, ದನಗಳ ಪರೀಕ್ಷೆ ಮಾಡುವಾಗ ಹೀನಸುಳಿ, ಪಾತಾಳಸುಳಿ, ದಾಗಣಿಸುಳಿ, ಪರಕಸುಳಿ, ನಮೂನಿಸುಳಿ, ಸಿಡಗಾಲು, ಇಷ್ಟನ್ನೆಲ್ಲಾ ನೋಡಿ ಒಪ್ಪಿಗೆಯಾದರೆ ಒಂದೆರಡು ದೂರ ನಡೆದಾಡಿಸಿ ಅನಂತರ ಕೊಂಡುಕೊಳ್ಳುವ ದೃಶ್ಯ ಅಪೂರ್ವವಾದುದು. ಈ ದನಗಳ ಜಾತ್ರೆ ನಡೆಯುತ್ತಿದ್ದಂತೆಯೇ ರಾತ್ರಿ ವೇಳೆಯಲ್ಲಿ ವಿದ್ಯುತ್ ದೀಪಗಳಲ್ಲಿ ಅಲಂಕೃತವಾದ ಮೆರವಣಿಗೆ ವಾದ್ಯಗೋಷ್ಠಿಯಲ್ಲಿ ಜರುಗುತ್ತದೆ. ಅಂದು ರೈತರ ಆನಂದವೋ ಆನಂದ. ಎಲ್ಲಾ ದೈನಿಕ ಪೂಜಾ ಆಚರಣೆಗೆ ಸಿದ್ಧತೆಗಳು ನಡೆಯುತ್ತಿದ್ದಂತೆ ಅನಂತರದಲ್ಲಿ ಕ್ರಮವಾಗಿ ದೇವತಾ ಪ್ರಾರ್ಥನೆ ಉತ್ಸವಗಳು, ಜರುಗಿ, ರಥಸಪ್ತಮಿಯಂದು ಸೂರ್ಯದೇವನ ಜನ್ಮ ದಿವಸದಂದು ಹೇಮಾವತಿ ನದಿಯಲ್ಲಿ ಪುಣ್ಯಸ್ನಾನ ಮಾಡಿ ಸೂರ್ಯೋದಯದ ಶುಭ ಮುಹೂರ್ತದಲ್ಲಿ ತೇರು ಬೆಳಗಿನ ವೇಳೆಯಲ್ಲಿ ಅರ್ಧಭಾಗ ಹರಿಯುತ್ತದೆ. ಇನ್ನು ಅರ್ಧಭಾಗ ಮಧ್ಯಾಹ್ನದ ನಂತರ ಹರಿಯುತ್ತದೆ. ಈ ಸಂದರ್ಭದಲ್ಲಿ ವಿವಾಹವಾದ ನವದಂಪತಿಗಳು ಹಗ್ಗವನ್ನು ಮುಟ್ಟಿ ತೇರನ್ನು ಎಳೆದರೆ ಗಂಡುಮಕ್ಕಳಾಗುತ್ತದೆ ಎಂಬ ಮಾತಿನಲ್ಲಿ ನಂಬಿಕೆಯಿಟ್ಟುಕೊಂಡಿದ್ದಾರೆ. ರಥೋತ್ಸವದಂದು ಹಣ್ಣು-ದವನ, ಸಣ್ಣ ಮೂಟೆಗಳಲ್ಲಿ ಧಾನ್ಯಗಳನ್ನು ಕಟ್ಟಿ ಹರಕೆ ಇತ್ತವರು ತೇರಿನ ಮೇಲೆ ಎಸೆಯುವುದು ಸ್ವಾಭಾವಿಕ ಆಗಿದೆ. ಸುತ್ತಮುತ್ತಲ ಹಳ್ಳಿಯ ಭಕ್ತರು ಗೋವಿಂದಾ, ಗೋವಿಂದಾ ಎಂದು ಭಕ್ತಿಯಿಂದ ಶಾಲಾಮಕ್ಕಳು ಸೇರಿ ತೇರನ್ನು ಎಳೆಯುವುದು ಸ್ವಾಭಾವಿಕವಾಗಿದೆ. ಅಕ್ಕಪಕ್ಕದ ನೆರೆಹೊರೆಯ ಗ್ರಾಮಗಳಿಂದ ಬರುತ್ತಿರುವ ಎತ್ತಿನಗಾಡಿಗಳ ಸಪ್ಪಳ ಹತ್ತೂರಿಗೆ ಸಂಭ್ರಮ ತರುವ ಹೇಮಗಿರಿ ಜಾತ್ರೆ ವಿಶಿಷ್ಟಪೂರ್ಣವಾದುದು. ಇಲ್ಲಿನ ಹೆಣ್ಣುಮಕ್ಕಳು ಶ್ರೀರಂಗನಾಥಸ್ವಾಮಿ ದರ್ಶನ ಪಡೆಯಲು ರಂಗುರಂಗಿನ ಉಡುಗೆಗಳನ್ನುಟ್ಟು ದರ್ಶನ ಮಾಡಲು ಬರುತ್ತಾರೆ. ಮಧ್ಯಾಹ್ನದ ತೇರು ಹರಿದು ಪುನಃ ಸ್ವಜಾಗವನ್ನು ಸೇರುತ್ತದೆ. ಹೀಗೆ ಶ್ರೀ ಕಲ್ಯಾಣವೆಂಕಟರಮಣ ಸ್ವಾಮಿಯ ತೇರು ಜರುಗುತದೆ.



**ಹೇಮಗಿರಿ ರಂಗನಾಥನ ತೆಪ್ಪೋತ್ಸವ**

ಶ್ರೀ ಕ್ಷೇತ್ರದಲ್ಲಿ ಶ್ರೀ ಕಲ್ಯಾಣ ವೆಂಕಟರಮಣಸ್ವಾಮಿಯ ತೇರು ಹರಿದು ಐದು ದಿನಗಳಾದ ನಂತರದಲ್ಲಿ ತೆಪ್ಪೋತ್ಸವ ಜರುಗುತ್ತದೆ. ಹೇಮಗಿರಿ ಬೆಟ್ಟದ

ಮುಂಭಾಗದಲ್ಲಿರುವ ಹೇಮಾವತಿ ನದಿಯಲ್ಲಿ ತೆಪ್ಪಾಕಟ್ಟಿ ಅದರಲ್ಲಿ ಶ್ರೀ ಕಲ್ಯಾಣ ವೆಂಕಟರಮಣಸ್ವಾಮಿಯ ಮೂರ್ತಿಯನ್ನಿಟ್ಟು ವಿದ್ಯುತ್ ದೀಪಗಳಿಂದ ಅಲಂಕರಿಸಿ ಹೇಮಾವತಿ ನದಿಯಲ್ಲಿ ಸಾಗುವುದನ್ನು ನೋಡಿದಾಗ ಹೇಮಗಿರಿ ಅಂದು ಸುವರ್ಣಗಿರಿಯಾಗಿ ರಾರಾಜಿಸುವಂತೆ ಕಾಣುತ್ತದೆ. ರಾತ್ರಿ ೯ ಗಂಟೆ ವೇಳೆಗೆ ಸುತ್ತಮುತ್ತಲ ಗ್ರಾಮದಿಂದ ಬಂದಿರುವಂತಹ ಎತ್ತಿನ ಗಾಡಿಗಳಲ್ಲಿನ ಪುರುಷರು, ಹೆಂಗಸರು, ಹೆಣ್ಣು ಮಕ್ಕಳಾದಿಯಾಗಿ ಬಂದು ದೇವರ ದರ್ಶನ ಪಡೆಯುತ್ತಾರೆ. ಅಂದು ತೆಪ್ಪೋತ್ಸವವು ಹೊಳೆಯ ಮಧ್ಯಭಾಗದಲ್ಲಿರುವ ಪಶ್ಚಿಮದಿಕ್ಕಿನಲ್ಲಿ ಬ್ರಹ್ಮಶಿಲೆ-ಯಾಗಿ ರಾರಾಜಿಸುತ್ತಿರುವ ಶಿಲೆಗೆ ಪೂಜಾದಿಗಳನ್ನು ನೆರವೇರಿಸುತ್ತಾರೆ. ಅದರ ಸುತ್ತ-ಮುತ್ತಲು ಸುಮಾರು ನಲವತ್ತಕ್ಕೂ ಮೀರಿದ ದೇವರ ಆವರಣಗಳು ಇಲ್ಲಿ ಸಂಪ್ರೋಕ್ಷಣೆಗಾಗಿ ಬರುವ ಪದ್ಧತಿಯಿದೆ. ಇದಕ್ಕೆ ನಿದಿಯೆಂದು ಕರೆಯಲಾಗುತ್ತದೆ. ಅಂದು ಕ್ಷಣಮಾತ್ರದಲ್ಲಿ ನಡೆದ ವೈಭವ ಕ್ಷಣಮಾತ್ರದಲ್ಲಿ ಮಿಂಚಿ ಮರೆಯಾಗುತ್ತದೆ. ಈ ನಿಸರ್ಗದ ತಾಣಕ್ಕೆ ರಾಜ್ಯದ ಇತರೆ ಜಿಲ್ಲೆಗಳಾದ ಮೈಸೂರು, ಬೆಂಗಳೂರು, ಮಂಡ್ಯ, ಹಾಸನಜಿಲ್ಲೆಗಳಿಂದಲೂ ಪ್ರವಾಸಿಗರು, ಭಕ್ತರುಗಳು ಬಸ್ಸುಕಾರುಗಳ ಮುಖಾಂತರ ಬಂದು ನಿಸರ್ಗವನ್ನು ನೋಡಿ ಆನಂದಿಸುವುದನ್ನು ಕಾಣಬಹುದಾಗಿದೆ.

### ವಿವಾಹಪದ್ಧತಿ

ಮಾನವ ಸಮಾಜ ವ್ಯವಸ್ಥೆಯಲ್ಲಿ ಕುಟುಂಬ ಪ್ರಮುಖವಾದ ಒಂದು ಕನಿಷ್ಠ ಘಟಕ. ಅದಕ್ಕೆ ವಿವಾಹ ಎಂಬುದು ಹೆಬ್ಬಾಗಿಲು ಕುಟುಂಬವಿರದೆ ಸಮಾಜವಿರಲಾರದು. ಬಹುಮಟ್ಟಿಗೆ ಮದುವೆಯಿರದೆ ಕುಟುಂಬ ಏರ್ಪಡಲಾರದು. ಕುಟುಂಬದಲ್ಲಿ ವ್ಯಕ್ತಿಗಳ ಸಂಬಂಧ ಮುಖ್ಯವಾಗಿರುತ್ತದೆ. ಈ ದೃಷ್ಟಿಯಲ್ಲಿ ವಿವಾಹ ಒಂದು ವಿಶಿಷ್ಟ ಆಚರಣೆಯಾಗಿದೆ. ಭಾರತೀಯ ಸಮಾಜದಲ್ಲಿ ವಿವಾಹ ಅತಿ ಮಹತ್ವಪೂರ್ಣವಾದ ಸ್ಥಾನ ಪಡೆದಿದೆ. ವಿವಾಹ ಶಾಶ್ವತ ಸಂಬಂಧವಾಗಬೇಕೆಂಬ ಆಶಯದೊಂದಿಗೆ ಅದು ಪವಿತ್ರವಾದುದೆಂಬ ಭಾವನೆಯ ಹಿನ್ನೆಲೆಯಲ್ಲಿ ಅದನ್ನೊಂದು ವಿಶಿಷ್ಟ ಆಚರಣೆಯನ್ನಾಗಿ ರೂಪಿಸಿದ್ದಾರೆ.

ಮದುವೆಯು ಆಯಾಯಾ ಜಾತಿಗಳಲ್ಲೇ ನಡೆಯುವುದು ವಾಡಿಕೆಯಾಗಿದೆ. ವಿವಾಹ ಪದ್ಧತಿಯಲ್ಲಿ ಮದುವೆಶಾಸ್ತ್ರ, ವರಪೂಜೆ, ಮಧುಪರ್ಕ, ಕನ್ಯಾದಾನ, ಕಂಕಣಬಂಧನ, ಮಾಂಗಲ್ಯಧಾರಣೆ, ಸಪ್ತಪದಿ, ದಂಪತಿವೀಳ್ಯ, ಹೆಣ್ಣುಒಪ್ಪಿಸುವುದು, ಶ್ರಾದ್ಧ ಹೀಗೆ ವಿವಾಹದಲ್ಲಿ ಕೆಲವು ಹಂತಗಳನ್ನು ಅನುಸರಿಸಲಾಗುತ್ತದೆ.

ವಿವಾಹವೆಂಬುದು ಸಮಾಜದ ಒಂದು ಅವಿಭಾಜ್ಯ ಅಂಗವಾಗಿದ್ದು ಇಲ್ಲಿನ ಸಮುದಾಯದಲ್ಲೂ ಅದು ಸಾಮಾಜಿಕ ವ್ಯವಸ್ಥೆ ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ.

ಹೀಗೆ ಹೇಮಗಿರಿ ಕ್ಷೇತ್ರದ ಸುತ್ತಮುತ್ತಲಿನ ಜನಸಮುದಾಯವೂ ಸಾಮಾಜಿಕ ವ್ಯವಸ್ಥೆಯನ್ನು ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಹೊಂದಿದ್ದು ಅದು ತನ್ನದೇ ಆದ ಸಾಂಸ್ಕೃತಿಕತೆಯನ್ನು ಪಡೆದುಕೊಂಡಿದೆ.

# ಅಧ್ಯಾಯ – ೬

## ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ ಮತ್ತು ಪ್ರಸ್ತುತ ಸ್ಥಿತಿಗತಿಗಳು

ಮಾನವ ಜೀವನದ ಅವಿಭಾಜ್ಯ ಅಂಗ ಶಿಕ್ಷಣವಾಗಿದೆ. ಯಾವುದೇ ಪ್ರದೇಶದ ಅಭಿವೃದ್ಧಿಯು ಅಲ್ಲಿನ ಶಿಕ್ಷಣವನ್ನವಲಂಬಿಸಿರುತ್ತದೆ. ಒಂದು ಸ್ಥಳವೂ ನಾನಾ ಕಾರಣಗಳಿಂದ ಮಹತ್ವಪೂರ್ಣವಾಗಿರುತ್ತದೆ. ಶಿಕ್ಷಣ ಕಾರ್ಯದಲ್ಲಿ ಮಹತ್ವಗಳಿಸಿಕೊಂಡ ಸ್ಥಳ ಶ್ರೀಕ್ಷೇತ್ರ ಹೇಮಗಿರಿ ಎಂದರೆ ತಪ್ಪಾಗಲಾರದು, ಏಕೆಂದರೆ ಗುರುಕುಲವೊಂದು ಸ್ಥಾಪನೆಯಾಗಿ ಅದು ರಾಜ್ಯದ ವಿವಿಧ ಭಾಗಗಳಿಂದ ಬರುವ ವಿದ್ಯಾರ್ಥಿಗಳಿಗೆ ಅಕ್ಷರದಾನ ಮಾಡುತ್ತಿದೆ. ಬೆಟ್ಟದ ರಂಗನಾಥ ಶ್ರೀ ಕಲ್ಯಾಣ ವೆಂಕಟರಮಣ ಸ್ವಾಮಿಯ ಹೆಸರಿನಲ್ಲೇ ವಿದ್ಯಾಸಂಸ್ಥೆಯು ಇಲ್ಲಿ ಸ್ಥಾಪನೆಯಾಗಿದ್ದು ಅದರ ಕಾರ್ಯಸಾಧನೆ ತಿಳಿಯೋಣ.

ಹೇಮಗಿರಿ ಕ್ಷೇತ್ರವೂ ಧಾರ್ಮಿಕ ಕ್ಷೇತ್ರಗಳಲ್ಲಿ ತನ್ನದೇಯಾದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ. ಶ್ರೀ ಕಲ್ಯಾಣ ವೆಂಕಟರಮಣಸ್ವಾಮಿಯ ದಿವ್ಯಧಾಮ, ಹಸಿರ ಜರತಾರಿಯುಟ್ಟು ಪಡುವಣ ದಿಕ್ಕಿಗೆ ವೈಯ್ಯಾರದಿಂದ ಹರಿಯುವ ಹೇಮಾವತಿ ಸುತ್ತಲೂ ಬೆಟ್ಟಗುಡ್ಡಗಳ ಸಾಲು ಹಕ್ಕಿಗಳ ಚಿಲಿಪಿಲಿ ಗಾನ ಮನಕ್ಕೆ ಹರ್ಷ ಆನಂದವೀಯುತ್ತದೆ. ಈ ಒಂದು ರಮಣೀಯ ಕ್ಷೇತ್ರದಲ್ಲಿ ಕಲಿಯಲು ಬರುವ ವಿದ್ಯಾರ್ಥಿಗಳೇ ಧನ್ಯರು.

ಜ್ಞಾನವೆಂಬುದು ಒಂದು ಶಕ್ತಿ. ಈ ಆಧುನಿಕ ಯುಗದಲ್ಲಿ ಜ್ಞಾನಕ್ಕೆ ತುಂಬಾ ಮಾನ್ಯತೆ ಇದೆ. ಈ ಜ್ಞಾನವನ್ನು ನೀಡುವವನೇ ಗುರು. ಇಂದಿನ ಮಕ್ಕಳೇ ಭವ್ಯಭಾರತದ ಭಾವೀ ಪ್ರಜೆಗಳು. ಅವರನ್ನು ಸತ್ಪ್ರಜೆಗಳನ್ನಾಗಿ ಮಾರ್ಪಡಿಸುವುದು ಗುರುವಿನ ಕೈಯಲ್ಲಿದೆ, ಅಂತಹ ಸದ್ಗುಣಗಳನ್ನೊಳಗೊಂಡ ಗುರುವೃಂದಕ್ಕೆ ಹೇಮಗಿರಿಯ ಶ್ರೀಕಲ್ಯಾಣವೆಂಕಟರಮಣಸ್ವಾಮಿ ಗುರುಕುಲ ಪ್ರಖ್ಯಾತಿ ಪಡೆದಿರುವುದನ್ನು ಕಾಣಬಹುದಾಗಿದೆ.

ಹೇಮಗಿರಿಯ ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ಶಿಕ್ಷಣ ಸಂಸ್ಥೆಯು ಸ್ಥಾಪನೆ-ಯಾಗಿ ಬೆಳೆದುಬಂದ ಹಾದಿಯನ್ನು ಸವಿವರವಾಗಿ ನೋಡಬಹುದಾಗಿದೆ.

## ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ವಿದ್ಯಾಸಂಸ್ಥೆ-ಹೇಮಗಿರಿ

ಹೇಮಗಿರಿ ನಿಸರ್ಗದತ್ತ ತಂಪಿನ ತೋಪಿನಲ್ಲಿ ಪುರಾತನ ಗುರುಕುಲವನ್ನು ನೆನಪಿಗೆ ತರುವ ವಿದ್ಯಾಶಾಲೆಯು ತನ್ನ ವಿದ್ಯಾ ಸೌರಭದಿಂದ ರಾಜ್ಯದ ಜನರನ್ನು ಆಕರ್ಷಿಸುತ್ತಿದೆ. ರಮಣೀಯವಾದ ನಿಸರ್ಗಸೌಂದರ್ಯ, ವಿದ್ಯಾರ್ಥಿಗಳ ಮನಸ್ಸಿಗೆ ಏಕಾಗ್ರತೆಯನ್ನು ಉಂಟುಮಾಡುವ ಪ್ರಶಾಂತ ವಾತಾವರಣ ಇವುಗಳಿಂದ ಈ ಹೇಮಗಿರಿ ವಿದ್ಯಾಶಾಲೆಯು ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸುತ್ತಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಹೇಮಗಿರಿಯ ಸುತ್ತಮುತ್ತಲಿನ ಗ್ರಾಮಗಳ ವಿದ್ಯಾಭಿವೃದ್ಧಿಗಾಗಿ ಈ ಹೇಮಗಿರಿ ಕ್ಷೇತ್ರದಲ್ಲಿ ವಿದ್ಯಾಕೇಂದ್ರದ ಸ್ಥಾಪನೆ ಅನಿವಾರ್ಯ ಹಾಗೂ ಅಗತ್ಯವೆಂದು ಮನಗೊಂಡು ಕರ್ನಾಟಕ ವಿದ್ಯಾಇಲಾಖೆಯ ನಿವೃತ್ತ ಸಂಯುಕ್ತ ನಿರ್ದೇಶಕರಾದ ಶ್ರೀ ಜಿ.ಪಿ.ಶಿವರಾಮ್ ಮಾಜಿ ವಿಧಾನ ಸಭಾ ಸದಸ್ಯರಾದ ಲಕ್ಷ್ಮೀಪುರದ ಶ್ರೀ ಎನ್.ನಂಜೇಗೌಡರು ಬಂಡಿಹೊಳೆ ಬಸವೇಗೌಡರು, ಕುಪ್ಪಹಳ್ಳಿಯ ವೆಂಕಟರಮಣಯ್ಯನವರು ಮುಂತಾದ ಸ್ಥಳೀಯ ಮುಖಂಡರು ಹಾಗೂ ಸುತ್ತಮುತ್ತಲಿನ ಗ್ರಾಮದ ಜನರ ಸಹಾಯ ಸಹಕಾರಗಳಿಂದ ಮತ್ತು ಇಲಾಖಾ ಅಧಿಕಾರಿ ವರ್ಗದವರ ಸಹಕಾರಗಳಿಂದ ೧೯೬೩-೬೪ನೇ ಸಾಲಿನಲ್ಲಿ ಹೇಮಗಿರಿಯಲ್ಲಿ ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ವಿದ್ಯಾಸಂಸ್ಥೆ ಎಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು.

ವಿದ್ಯಾಸಂಸ್ಥೆಯ ವತಿಯಿಂದ ಹೇಮಗಿರಿಯಲ್ಲಿ ಎರಡು ಹಾಸ್ಟಲ್‌ಗಳನ್ನು ಸ್ಥಾಪಿಸಲಾಗಿದೆ. ೧) ಒ.ಬಿ.ಸಿ. ವಸತಿ ಗೃಹ ೨) ಭೃಗುಋಷ್ಯಾಶ್ರಮ

ಆರ್ಫನೇಜ್ ಈ ಎರಡು ವಸತಿಗೃಹಗಳಿಗೂ ಸರ್ಕಾರವೂ ಅನುದಾನ ನೀಡುತ್ತಿದೆ. ಈ ಎರಡೂ ವಸತಿಗೃಹಗಳಿಂದ ಒಟ್ಟು ೨೫೦ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ. ಸರ್ಕಾರದ ನೆರವಿನಿಂದ ಒಬಿಸಿ ವಸತಿಗೃಹದಲ್ಲಿ ೨೫ ವಿದ್ಯಾರ್ಥಿಗಳಿಗೂ ಆರ್ಫನೇಜಿನಲ್ಲಿ ೫೦ ವಿದ್ಯಾರ್ಥಿಗಳಿಗೂ ಸಂಸ್ಥೆಯ ವತಿಯಿಂದ ೨೫ ವಿದ್ಯಾರ್ಥಿಗಳಿಗೂ ಉಚಿತ ಊಟ, ವಸತಿ ಸೌಲಭ್ಯವನ್ನು ಅರ್ಹ ಬಡ ವಿದ್ಯಾರ್ಥಿ ಗಳಿಗೆ ಒದಗಿಸಿಕೊಡಲಾಗುತ್ತಿದೆ.

ಈ ಪ್ರೌಢಶಾಲೆಯ ವಿದ್ಯಾಪ್ರಗತಿಯನ್ನು ವೀಕ್ಷಿಸಿದ ಸರ್ಕಾರವು ಶಾಲೆಗೆ ೧೯೭೩-೭೪ನೇ ಸಾಲಿನಿಂದ ಸ್ಥಾಯೀ ಮಾನ್ಯತೆಯನ್ನೂ ಸಹ ನಿಡಿದೆ.

ಜಿ.ಪಿ.ಶಿವರಾಂರವರು ಶಾಲೆಯ ಪ್ರಗತಿಗಾಗಿ ಸಾರ್ವಜನಿಕರಿಂದ ಉದಾರವಾಗಿ ಕೊಡುಗೆಗಳನ್ನು ಸಂಗ್ರಹಿಸಿ ಶಾಲೆಯ ಪ್ರಗತಿಗೆ ಅವಿರತವಾಗಿ ಶ್ರಮಿಸಿದ್ದಾರೆ. ೧೯೮೫-೮೬ ರಲ್ಲಿ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠಕ್ಕೆ ಸೇರ್ಪಡೆಗೊಂಡು ಮಠದ ಅಧ್ಯಕ್ಷರು ಆದಂತಹ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರು ಈ ಶಾಲೆಯ ಪ್ರಗತಿಗೆ ಸಾಕಷ್ಟು ಕಟ್ಟಡಗಳನ್ನು ನಿರ್ಮಾಣಮಾಡಿ ಪ್ರೌಢಶಾಲೆಯಿದ್ದುದನ್ನು ಒಂದರಿಂದ ಏಳನೇ ತರಗತಿಯವರೆಗಿನ ಹಿರಿಯ ಪ್ರಾಥಮಿಕ ಶಾಲೆಯನ್ನು, ಪದವಿಪೂರ್ವ ಕಾಲೇಜನ್ನು ಹಾಗೂ ಸಂಸ್ಕೃತ ಪಾಠಶಾಲೆಯನ್ನು ಸಹ ತೆರೆದು ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿರುತ್ತಾರೆ.

ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ವಿದ್ಯಾಸಂಸ್ಥೆಯಲ್ಲಿ ೧೩೦೦ ವಿದ್ಯಾರ್ಥಿಗಳ-ವರೆಗೂ ವಿದ್ಯಾರ್ಜನೆಯನ್ನು, ವಸತಿ ಹಾಗೂ ಶಿಕ್ಷಣದ ಪ್ರಯೋಜನವನ್ನು ಪಡೆದು-ಕೊಳ್ಳುತ್ತಿದ್ದಾರೆ. ೧೯೯೦ರಲ್ಲಿ ಭೃಗುಮುನಿಗಳ ಹೆಸರಿನಲ್ಲಿ ಆಶ್ರಮವೊಂದನ್ನು ಸ್ಥಾಪನೆ ಮಾಡಿ ಶ್ರೀ ಮಲ್ಲೇಶ್ವರನಾಥ ಸ್ವಾಮಿಯವರನ್ನು ನೇಮಕ ಮಾಡಿರುತ್ತಾರೆ. ಶ್ರೀಯುತರು ಈ ವಿದ್ಯಾಸಂಸ್ಥೆಗೆ ಸೇರಿದಂತಹ ಸುಮಾರು ೩೮ ಎಕರೆಯ ಗದ್ದೆಯಲ್ಲಿ ಸ್ವತಃ ತಾವೇ ನಿಂತುಕೊಂಡು ಬೇಸಾಯವನ್ನು ಮಾಡಿಸಿ ಉತ್ಪಾದನೆಯಾದಂತಹ ಬೆಳೆಯ ಜೊತೆಗೆ ಹಳ್ಳಿಗಳಿಗೂ ತೆರಳಿ ಮಠಕ್ಕೆ ಉದಾರವಾಗಿ ದಾನ ಮಾಡುವ ಭಕ್ತಾದಿಗಳಿಂದ ದವಸಧಾನ್ಯಗಳನ್ನು ಸಂಗ್ರಹಣೆ ಮಾಡುವುದರ ಜೊತೆಗೆ ಹಣಕಾಸನ್ನು ಸಂಗ್ರಹಣೆ ಮಾಡಿ ವಾರ್ಷಿಕವಾಗಿ ನೂರಾರು ಚೀಲಗಳಷ್ಟು ಭತ್ತ, ರಾಗಿಯನ್ನು ಹಣಕಾಸಿನ ನೆರವನ್ನು ಮುಕ್ತಮನಸ್ಸಿನಿಂದ ಮಲ್ಲೇಶ್ವರನಾಥ ಸ್ವಾಮೀಜಿಯವರು ಶ್ರೀಕ್ಷೇತ್ರ ಚುಂಚನಗಿರಿಗೆ ಕಳುಹಿಸುತ್ತಾ ಬಂದರು. ಹೀಗೆ ಅವಿರತವಾಗಿ ದುಡಿದಂತಹ ಶ್ರೀಯುತರು ೨೦೦೩ರಲ್ಲಿ ಮೂತ್ರಪಿಂಡಗಳ ತೊಂದರೆಗೊಳಗಾಗಿ ದೇವರಲ್ಲಿ ಐಕ್ಯರಾದರು.

ಶ್ರೀ ಮಲ್ಲೇಶ್ವರನಾಥಸ್ವಾಮೀಜಿಯವರ ಕಾಲದಲ್ಲಿಯೂ ಈ ವಿದ್ಯಾಸಂಸ್ಥೆಯು ಪ್ರಗತಿಯ ಶಿಖರವೇರಿದ್ದು ಎಸ್.ಎಸ್.ಎಲ್.ಸಿ ಮತ್ತು ಪಿಯುಸಿಯಲ್ಲಿ ಉತ್ತಮ ಫಲಿತಾಂಶವನ್ನು ಪಡೆಯುತ್ತಿತ್ತು. ಜಿಲ್ಲಾಮಟ್ಟ ಹಾಗೂ ರಾಜ್ಯಮಟ್ಟಕ್ಕೂ ವಿವಿಧ ವಿಭಾಗಗಳಲ್ಲಿ ವಿದ್ಯಾರ್ಥಿಗಳು ಆಯ್ಕೆಯಾಗಿ ಹೋಗಿ ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಪಡೆದು ಶಾಲೆಗೆ ಕೀರ್ತಿಯನ್ನು ತಂದಿರುತ್ತಾರೆ. ಸುತ್ತಮುತ್ತಲಿನ

ಸ್ಥಳೀಯ ಮಹನೀಯರು ಹಳ್ಳಿಯ ಮಕ್ಕಳ ವಿದ್ಯಾಪ್ರಗತಿಗಾಗಿ ಶಾಲಾನಿರ್ಮಾಣ ಕಾರ್ಯದಲ್ಲಿ ಅಪಾರ ಶ್ರಮಪಟ್ಟಿದ್ದು ಅನಂತರದಲ್ಲಿ ಚುಂಚನಗಿರಿಯ ಶ್ರೀಯುತರಿಂದ ಮತ್ತಷ್ಟು ಪ್ರಗತಿ ಹೊಂದಲು ಸಹಕಾರಿಯಾಯಿತು. ಇಂದಿಗೂ ಇಲ್ಲಿ ಶಾಲೆಯು ವ್ಯವಸ್ಥಿತವಾಗಿ ನಡೆದುಕೊಂಡು ಹೋಗುತ್ತಿದೆ. ಮಲ್ಲೇಶ್ವರನಾಥ ಸ್ವಾಮೀಜಿಯವರ ಮರಣದಿಂದಾಗಿ ಇಲ್ಲಿನ ಭೃಗುಮುನಿಗಳ ಆಶ್ರಮದ ತೆರವಾದಂತಹ ಹುದ್ದೆಗೆ ಯಾರೂ ನೇಮಕವಾಗದ ಕಾರಣ ಹೇಮಗಿರಿಯ ಸೊಬಗನ್ನು ಕಾಪಾಡಿಕೊಳ್ಳಲು ಕಷ್ಟವಾಗುತ್ತಿದೆ. ಹಾಗಾಗಿ ಚುಂಚನಗಿರಿಯ ಪೀಠಾಧ್ಯಕ್ಷರು ಆದಷ್ಟು ಬೇಗ ಈ ಆಶ್ರಮಕ್ಕೆ ಸ್ವಾಮೀಜಿಯೊಬ್ಬರನ್ನು ನೇಮಕಮಾಡಿ ಹೇಮಗಿರಿಯ ಸಮೃದ್ಧ ಅಭಿವೃದ್ಧಿಗೆ ನೆರವಾಗುವಂತೆ ಮಾಡಬೇಕಾಗಿದೆ. ಭೃಗುಮುನಿಗಳ ತಪಸ್ಸಿನ ತಾಣ ನಿಸರ್ಗ ಸೌಂದರ್ಯದ ತಾಣವಾಗಿಯೇ ಸದಾ ಕಂಗೊಳಿಸಬೇಕೆಂಬುದೇ ಭಕ್ತಜನರ ಮಹಾದಾಶಯವಾಗಿದೆ.

**ಸಮುದಾಯಭವನ:** ಹೇಮಗಿರಿಯ ಪ್ರಶಾಂತ ನೈಸರ್ಗಿಕ ಮಡಿಲಲ್ಲಿ ಸಮುದಾಯಭವನ ವೊಂದನ್ನು ನಿರ್ಮಾಣ ಮಾಡಲಾಗಿದೆ. ಈ ಸಮುದಾಯದ ನಿರ್ಮಾಣಕ್ಕೆ ಸುತ್ತಮುತ್ತಲಿನ ಗ್ರಾಮಸ್ಥರೆಲ್ಲರೂ ಧನಸಹಾಯ ಮಾಡಿ ಒಗ್ಗಟ್ಟಿನಿಂದ ನಿರ್ಮಾಣ-ಕಾರ್ಯ ಮಾಡಿರುತ್ತಾರೆ. ಇಲ್ಲಿ ಮದುವೆಗಳು ನಡೆಯುತ್ತಿರುತ್ತವೆ. ಶ್ರೀಕಲ್ಯಾಣ ವೆಂಕಟರಮಣಸ್ವಾಮಿಯ ಸಾನಿಧ್ಯದಲ್ಲಿ ಸಪ್ತಪದಿ ತುಳಿದು ಜೀವನವನ್ನು ರೂಪಿಸಿ-ಕೊಳ್ಳುವ ಸಂಗಾತಿಗಳನ್ನು ಕಾಣಬಹುದಾಗಿದೆ. ದೂರ-ದೂರದ ಪ್ರದೇಶಗಳಿಂದಲೂ ಜನರು ಇಲ್ಲಿಗೆ ಬಂದು ಈ ಸನ್ನಿದಿಯಲ್ಲೇ ವಿವಾಹ ಮಾಡಿಕೊಳ್ಳ ಬೇಕೆಂಬ ಮನೋಭಿಲಾಷೆಯನ್ನು ಹೊಂದಿರುವ ಭಕ್ತಸಾಗರವನ್ನು ಕಾಣಬಹುದಾಗಿದೆ. ಈ ಸಮುದಾಯಭವನವು ಹೇಮಗಿರಿಯ ಬೆಟ್ಟದ ತಪ್ಪಲಲ್ಲಿ ಹೇಮಾವತಿ ನದಿಯ ದಡದಲ್ಲಿರುವುದರಿಂದ ತುಂಬಾ ಪ್ರಾಮುಖ್ಯತೆ ಪಡೆದುಕೊಂಡಿದೆ. ವಿಶಾಲವಾದಂತಹ ಸ್ಥಳಾವಕಾಶವನ್ನು ಹೊಂದಿರುವುದರಿಂದ ಇಲ್ಲಿ ಕಾರ್ಯಕ್ರಮಗಳು ಆಗಾಗ್ಗೆ ನಡೆಯುತ್ತಿರುತ್ತವೆ. ಪರದಂತಹ ಅನ್ನದಾನದ ಕಾರ್ಯಗಳು ಸಹ ನಡೆಯುತ್ತಿವೆ ಈ ಸಮುದಾಯಭವನದಲ್ಲಿ, ಹಾಗಾಗಿ ಇದು ತುಂಬಾ ಪ್ರಾಮುಖ್ಯತೆ ಪಡೆದುಕೊಂಡಿದೆ.

**ಹೇಮಗಿರಿ ದೇವಸ್ಥಾನ:** ಕೆ.ಆರ್.ಪೇಟೆ ತಾಲ್ಲೂಕಿನ ಜೀವನದಿಯಾಗಿರುವ ಹೇಮಾವತಿ ನದಿಯ ತಪ್ಪಲಿನಲ್ಲಿರುವ ಶ್ರೀಕ್ಷೇತ್ರ ಹೇಮಗಿರಿಯು ನೈಸರ್ಗಿಕ ಪ್ರಶಾಂತತೆಗೆ ಹೆಸರುವಾಸಿ

ಯಾಗಿದೆ. ಇಲ್ಲಿನ ಶ್ರೀ ವೆಂಕಟರಮಣಸ್ವಾಮಿ ದೇವಾಲಯ ಬಹಳ ಜನಪ್ರಿಯತೆಯನ್ನು ಪಡೆದಿದೆ. ಕುಪ್ಪಳ್ಳಿ, ನಾಟನಹಳ್ಳಿ, ಬಂಡಿಹೊಳೆ, ಬಿ.ಬಿ.ಕಾವಲ್‌ನ ಮಧ್ಯಭಾಗದಲ್ಲಿ ಒಂದು ಪುಟ್ಟದಾದ ಗಿರಿಯಿದ್ದು, ಈ ಗಿರಿಯ ಮೇಲಿರುವ ದೇವಸ್ಥಾನವೇ ಶ್ರೀರಂಗನಾಥನ ದೇವಸ್ಥಾನವಾಗಿದೆ. ೧೮೩ ಮೆಟ್ಟಿಲುಗಳನ್ನು ಏರಿಹೋದರೆ ಶ್ರೀರಂಗನಾಥ ಮತ್ತು ಪದ್ಮಾವತಿಯರ ಸಾನಿಧ್ಯ ತಲುಪಬಹುದು. ದೇವಸ್ಥಾನವು ಗಿರಿಯ ತುದಿಯಲ್ಲಿದ್ದು ಸುತ್ತಲೂ ಕಲ್ಲುಬಂಡೆಗಳಿಂದ ನಿರ್ಮಿಸಲಾಗಿದೆ. ಇಲ್ಲಿ ಯಾವುದೇ ಕೆತ್ತನೆಗಳನ್ನು ಮಾಡಿರುವುದಿಲ್ಲ. ರಂಗನಾಥನು ಭೃಗುಮುನಿ ಮಹರ್ಷಿ-ಗಳಿಗೆ ಕಲ್ಯಾಣವೆಂಕಟರಮಣನಾಗಿ ದರ್ಶನ ನೀಡಿ ಆ ಪ್ರದೇಶದ ನಿಸರ್ಗ ಸೌಂದರ್ಯವನ್ನು ಕಾಪಾಡುತ್ತಾ ಅಲ್ಲಿನ ಜನರ ಕಲ್ಯಾಣಕ್ಕಾಗಿಯೇ ನೆಲೆನಿಂತಿರುವನು. ಈ ಗಿರಿಯ ಸುತ್ತಲೂ ಬಯಕೆ ಮಾಡಿಕೊಂಡು ಪ್ರದಕ್ಷಿಣೆ ಹಾಕಿದರೆ ಅವರ ತೊಂದರೆಗಳೆಲ್ಲಾ ದೂರವಾಗುವುದು ಎಂಬುದು ಇಲ್ಲಿನ ಭಕ್ತರ ನಂಬಿಕೆಯಾಗಿದೆ.

**ಭೃಗುಮುನಿ ಗುಹೆ:** ಹೇಮಾವತಿ ನದಿಯ ತಪ್ಪಲಿನಲ್ಲಿರುವ ಗಿರಿಯಲ್ಲಿರುವ ಗುಹೆಯನ್ನು ಭೃಗುಮುನಿ ಗುಹೆ ಎಂದೂ ಕರೆಯಲಾಗುತ್ತದೆ. ಏಕೆಂದರೆ ಅಂದಿನ ಪೌರಾಣಿಕ ಯುಗದಲ್ಲಿ ಭೃಗುಮುನಿಗಳು ಪಶ್ಚಿಮ ದಿಕ್ಕಿನೆಡೆಗೆ ಹರಿಯುವ ಹೇಮಾವತಿಯ ಸುಂದರ ದೃಶ್ಯವನ್ನು ಕಂಡು ಹಾಗೂ ಅಲ್ಲಿನ ಸುತ್ತಮುತ್ತಲ ಪರಿಸರವನ್ನು ಕಂಡಂತಹ ಮಹರ್ಷಿಗಳು ತಪಸ್ಸಿಗೆ ಅದೇ ಸ್ಥಳವನ್ನು ಆಯ್ಕೆ ಮಾಡಿಕೊಂಡು ವಾಸವಾಗಿದ್ದ ಸ್ಥಳವೇ ಭೃಗುಮುನಿ ಗುಹೆಯಾಗಿದೆ. ಈ ಗುಹೆಯಿಂದ ಬೆಳ್ಳಿಬೆಟ್ಟಕ್ಕೆ, ಶ್ರೀರಂಗಪಟ್ಟಣಕ್ಕೆ, ಹೊಸಪಟ್ಟಣಕ್ಕೆ ಸುರಂಗಮಾರ್ಗಗಳಿವೆ ಎಂಬ ವಿಷಯಗಳು ಜನರಲ್ಲಿನ ಆಳವಾದ ನಂಬಿಕೆಗಳಾಗಿವೆ. ಆದರೆ ಈ ಗುಹೆಯೊಳಗೆ ಹೋಗುವ ಪ್ರಯತ್ನ ಯಾರೂ ಮಾಡಿರುವುದಿಲ್ಲ.

**ಭೃಗುಮುನಿ ಆಶ್ರಮ:** ಶ್ರೀಕ್ಷೇತ್ರ ಹೇಮಗಿರಿಯಲ್ಲಿರುವ ಪ್ರಸಿದ್ಧ ಕಟ್ಟಡಗಳಲ್ಲಿ ಭೃಗುಮುನಿ ಆಶ್ರಮವೂ ಸಹ ಒಂದಾಗಿದೆ. ಇಲ್ಲಿನ ಶಿಕ್ಷಣಸಂಸ್ಥೆಯನ್ನು ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠಕ್ಕೆ ವಹಿಸಿದಾಗಿನಿಂದ ಶೈಕ್ಷಣಿಕವಾಗಿ ಹಾಗೂ ಧಾರ್ಮಿಕ ಕ್ಷೇತ್ರವಾಗಿ ಇದನ್ನು ಬೆಳೆಸುವುದರಲ್ಲಿ ಮಠವೂ ಶ್ರಮಿಸುತ್ತಿದೆ. ಅದಕ್ಕಾಗಿ ೧೯೯೨ರಲ್ಲಿ ಭೃಗುಮುನಿ ಯವರ ಹೆಸರಿನಲ್ಲಿ ಮಠವೊಂದನ್ನು ನಿರ್ಮಿಸಿ ಇಲ್ಲಿಗೆ ಸ್ವಾಮೀಜಿಯೊಬ್ಬರನ್ನು ನೇಮಕ ಮಾಡಲಾಗಿತ್ತು. ಆದರೆ ೨೦೦೬ರಲ್ಲಿ ಮೂತ್ರಪಿಂಡಗಳ ಕಾಯಿಲೆಯಿಂದ ಶ್ರೀಮಲ್ಲೇಶ್ವರ

ನಾಥ ಸ್ವಾಮೀಜಿಯವರು ಅಕಾಲ ಮರಣ ಹೊಂದಿದರು. ಪ್ರಸ್ತುತವಾಗಿ ಈ ಆಶ್ರಮವೂ ಹಾಗೆ ಪಾಳುಬಿದ್ದಿದ್ದು ಯಾರೂ ಹೊಸ ಸ್ವಾಮೀಜಿಯವರು ಇಲ್ಲಿಗೇ ನೇಮಕವಾಗದಿರುವುದು ದುರಂತವಾಗಿದೆ.

**ಕೋಡುಗಲ್ಲು:** ಶ್ರೀಕ್ಷೇತ್ರದ ಗಿರಿಯಲ್ಲಿ ದೇವಸ್ಥಾನದ ಎಡಭಾಗದಲ್ಲಿ ಆಕಾಶಕ್ಕೆ ಮುಖಮಾಡಿಕೊಂಡು ಭೂಮಿಯಿಂದಲೇ ವಕ್ರ-ವಕ್ರವಾಗಿ ಬೆಳೆದು ನಿಂತಿರುವ ದೃಶ್ಯ ಎಂತಹವರಿಗೂ ಕಣ್ಮನ ಸೆಳೆಯುವುದರಲ್ಲಿ ಸಂಶಯವಿಲ್ಲ. ಈ ಕೋಡುಗಲ್ಲಿನ ಅಡಿಭಾಗವು ಅಗಲವಾಗಿದ್ದು ಅಲ್ಲಿ ಹತ್ತಿ ನಿಂತು ನೋಡಿದರೆ ಹೇಮಾವತಿ ನದಿ ಹರಿಯುವ ಪಾತ್ರವನ್ನೂ, ಅದರ ಸುತ್ತಮುತ್ತಲಿನ ಹಸಿರುಗದ್ದೆಗಳನ್ನೊಳಗೊಂಡ ಪ್ರದೇಶವೂ ಕಣ್ಣಿಗೆ ಇಂಪುನೀಡುತ್ತದೆ. ಈ ಕಲ್ಲಿನ ಮೆಲೆ ಕೃಷ್ಣನ ಪಾದಗಳು ಮೂಡಿದ್ದು ಇಲ್ಲಿಂದಲೇ ಭಗವಾನ್ ಶ್ರೀಕೃಷ್ಣನು ಹೇಮಾದ್ರಿಯ ಸೌಂದರ್ಯ ವೀಕ್ಷಣೆ ಮಾಡಿದನೆಂಬ ನಂಬಿಕೆಯಿದೆ.

**ಸಾಮಾಜಿಕ ಅರಣ್ಯ:** ಹೇಮಗಿರಿಯಲ್ಲಿ ಸಾಮಾಜಿಕ ಅರಣ್ಯವನ್ನು ಬೆಳೆಸಲಾಗಿದೆ. ಇದರಲ್ಲಿ ಹಲವು ಜಾತಿಯ ಸಸಿಗಳನ್ನು ಬೆಳೆಸಿ ಮಾರಾಟ ಮಾಡಲಾಗುತ್ತಿದೆ. ಹೇಮಗಿರಿಯ ಅನತಿದೂರದಲ್ಲಿ ಕಾಡು ಪ್ರದೇಶ ಕಂಡುಬರುವುದರಿಂದಲೂ ಸಾಮಾಜಿಕ ಅರಣ್ಯದ ಶಾಖೆಯನ್ನು ಇಲ್ಲಿ ತೆರೆಯಲಾಗಿದೆ. ಬೀಟೆ, ಸಾಗುವಾನಿ, ಸಿಲ್ವರ್, ಗಂಧದ ಗಿಡ, ಹಣ್ಣು-ಹಂಪಲುಗಳ ಗಿಡಗಳನ್ನು ಇಲ್ಲಿ ಬೆಳೆಸಿ ರಿಯಾಯಿತಿ ದರದಲ್ಲಿ ಸರ್ಕಾರದ ವತಿಯಿಂದ ಮಾರಾಟಮಾಡಲಾಗುತ್ತಿದೆ.

**ಸರ್ಕಾರಿ ಕಟ್ಟಡಗಳು:** ಶ್ರೀಕ್ಷೇತ್ರದಲ್ಲಿರುವ ಕಟ್ಟಡಗಳಲ್ಲಿ ಸರ್ಕಾರಿ ಕಟ್ಟಡಗಳೆಂದರೆ ಆಫೆಕ್ಸ್ ಬ್ಯಾಂಕ್‌ನ ನೆರವಿನೊಂದಿಗೆ ಸ್ಥಾಪನೆ ಮಾಡಲಾಗಿರುವಂತಹ ವ್ಯವಸಾಯೋತ್ಪನ್ನ ಸಹಕಾರ ಸಂಘ ನಿಯಮಿತ ಸೊಸೈಟಿ ಹಾಗೂ ಹೇಮಗಿರಿಯಿಂದ ಬಿ.ಬಿ.ಕಾವಲ್‌ಗೆ ನೀರು ಸರಬರಾಜು ಮಾಡುವಂತಹ ಏತನೀರಾವರಿ ವ್ಯವಸ್ಥೆಯ ಕಟ್ಟಡ ಮತ್ತು ಕೆ.ಆರ್.ಪೇಟೆ ಪಟ್ಟಣಕ್ಕೆ ಕುಡಿಯಲು ನೀರು ಈ ಹೇಮಾವತಿ ನದಿಯಿಂದಲೇ ಸರಬರಾಜು ಆಗುವುದರಿಂದ ಜಲಶುದ್ಧೀಕರಣ ಘಟಕದ ಕಟ್ಟಡಗಳು ಸಹ ಇವೆ. ಹೇಮಗಿರಿಯಿಂದ ಅನತಿ ದೂರದಲ್ಲಿ ಅರಣ್ಯ ಇಲಾಖೆಯ ಕಛೇರಿಯು ಸಹ ಇದೆ.

**ಪ್ರವಾಸಿಮಂದಿರ:**ಹೇಮಗಿರಿಯ ಬೆಟ್ಟದ ತಪ್ಪಲಿನಲ್ಲಿ ಬಂಡಿಹೊಳೆಯ ಹಾದಿಯಲ್ಲಿರುವ ಕಟ್ಟಡವೇ ಪ್ರವಾಸಿಮಂದಿರ, ಇದು ಬಹಳ ಹಿಂದಿನ ಕಾಲದಲ್ಲಿಯೇ ನಿರ್ಮಾಣವಾಗಿದ್ದು

ಜಯಚಾಮರಾಜೇಂದ್ರ ಒಡೆಯರ್‌ರವರು ಸಹ ಇಲ್ಲಿಗೆ ಭೇಟಿ ಮಾಡಿ ವಿಶ್ರಾಂತಿ ಪಡೆದು ಹೋಗಿದ್ದಾರೆ. ಇಂತಹ ಕಟ್ಟಡವು ೧೯೮೮-೮೯ರಲ್ಲಿ ಹಾನಿಗೊಳಗಾಗಿದ್ದು ಸರ್ಕಾರದ ನಿರ್ಲಕ್ಷ್ಯದ ಕಾರಣದಿಂದಾಗಿ ಇಂದೂ ಪೂರ್ಣವಾಗಿ ಕುಸಿದುಹೋಗಿದೆ. ಈಗ ಅದರ ಅವಶೇಷಗಳಾದ ಇಟ್ಟಿಗೆಗಳು, ಬೋಳಾದ ಗೋಡೆಗಳು, ಪುಡಿಪುಡಿಯಾಗಿ ಬಿದ್ದಿರುವ ಹೆಂಚುಗಳನ್ನು ಕಾಣಬಹುದಾಗಿದೆ. ಶ್ರೀಕ್ಷೇತ್ರವನ್ನು ಪ್ರವಾಸಿಗರು ವೀಕ್ಷಣೆಗಾಗಿ ಧಾವಿಸುವುದರಿಂದ ಪ್ರವಾಸಿಮಂದಿರವನ್ನು ಪುನರ್‌ನಿರ್ಮಾಣ ಮಾಡಬೇಕಾಗಿ, ಸರ್ಕಾರ ಇದರತ್ತ ಗಮನ ಹರಿಸುವುದು ಅವಶ್ಯಕವಾಗಿದೆ.

**ಹೇಮಗಿರಿ ಅಣೆಕಟ್ಟು:** ಹೇಮಗಿರಿ ಬೆಟ್ಟದಿಂದ ಒಂದು ಕಿಲೋಮೀಟರ್ ದೂರದಲ್ಲಿ ಪಶ್ಚಿಮವಾಹಿನಿಯಾಗಿ ಹರಿಯುತ್ತಿರುವ ಹೇಮಾವತಿ ನದಿಗೆ ಅಣೆಕಟ್ಟು ಕಟ್ಟಲಾಗಿದೆ. ಮೈಸೂರು ಪ್ರಾಂತ್ಯವನ್ನು ಆಳುತ್ತಿದ್ದಂತಹ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ೧೮೮೦ರಲ್ಲಿ ಈ ಅಣೆಕಟ್ಟು ಕಟ್ಟಿಸಿದರು. ೪೧೫ ಮೀಟರ್ ಉದ್ದವಾಗಿರುವ ಈ ಅಣೆಕಟ್ಟಿನಿಂದ ಧುಮುಕುವ ನೀರಿನ ವೈಯ್ಯಾರವನ್ನು ಮನದಣಿಯೇ ನೋಡಿ ಮಣಿಯಬೇಕೆನಿಸುತ್ತದೆ. ಈ ಅಣೆಕಟ್ಟು ಸುತ್ತಮುತ್ತಲಿನ ವ್ಯವಸಾಯದ ಭೂಮಿಗೆ ಸಾಕಷ್ಟು ಪ್ರಮಾಣದಲ್ಲಿ ಕಾಲುವೆಯ ಮುಖಾಂತರ ನೀರು ಹಾಯಿಸುತ್ತದೆ, ಇದರಿಂದ ಭತ್ತ, ಕಬ್ಬು ಇಲ್ಲಿ ಯಥೇಚ್ಛವಾಗಿ ಈ ಭಾಗದಲ್ಲಿ ಬೆಳೆಯಲು ಸಾಧ್ಯವಾಗುತ್ತಿದೆ. ಪ್ರವಾಸಿಗರಿಗೂ ಈ ಅಣೆಕಟ್ಟು ಆಕರ್ಷಣೀಯ ಕೇಂದ್ರವಾಗಿದ್ದು ಸ್ನಾನ ಮಾಡಿಯೇ ತೆರಳುವಂತೆ ಈ ರಮ್ಯತಾಣ ಮನೋಲ್ಲಾಸವನ್ನು ಉಂಟುಮಾಡುತ್ತದೆ.

**ಚಂದಗಾನಹಳ್ಳಿ ಅಮ್ಮನವರ ದೇವಸ್ಥಾನ:** ಹೇಮಗಿರಿ ಅಣೆಕಟ್ಟಿನಿಂದ ಅನತಿ ದೂರದಲ್ಲಿರುವ ಹೊಸದಾಗಿ ನಿರ್ಮಿತವಾಗಿರುವ ಸೇತುವೆಯ ಪಕ್ಕದಲ್ಲಿಯೇ ಇರುವಂತಹ ದೇವಸ್ಥಾನವೇ ಚಂದಗಾನಹಳ್ಳಿ ಅಮ್ಮನವರ ದೇವಸ್ಥಾನವಾಗಿದೆ. ಮೊದಲಿಗೆ ಇಲ್ಲಿ ಚಂದಗಾನಹಳ್ಳಿ ಅಮ್ಮನವರ ವಿಗ್ರಹಮಾತ್ರವಿದ್ದು ಇತ್ತೀಚಿನ ದಿನಗಳಲ್ಲಿ ಆ ವಿಗ್ರಹಕ್ಕೆ ದೇವಸ್ಥಾನವನ್ನು ನಿರ್ಮಾಣ ಮಾಡಲಾಗಿದೆ. ಪ್ರತಿ ಭಾನುವಾರ, ಮಂಗಳವಾರ, ಶುಕ್ರವಾರ ಮತ್ತು ಅಮಾವಸ್ಯೆಯ ದಿನಗಳಲ್ಲಿ ಇಲ್ಲಿ ಜನರು ಪೂಜೆಗಾಗಿ ಬರುತ್ತಾರೆ. ಹರಕೆಗಳನ್ನು ಮಾಡಿಕೊಂಡು ತಮ್ಮ ಬಯಕೆಗಳು ಈಡೇರಿದಾಗ ಭಕ್ತಿಯಿಂದ ಈ ದೇವಿಗೆ ಕಾಯಿ, ಹಣ್ಣು, ಅರಿಶಿನ ಕುಂಕುಮ ಅರ್ಪಿಸಿ ದೇವತೆಯ ದ್ವಾರಪಾಲಕರಿಗೆ ಕುರಿ, ಮೇಕೆ, ಕೋಳಿ ಮತ್ತು ಹಂದಿಗಳನ್ನು ಬಲಿ ನೀಡುತ್ತಾರೆ.

ಇತ್ತೀಚಿನ ದಿನಗಳಲ್ಲಿ ಈ ದೇವಿಯ ಭಕ್ತರು ದಿನೇ–ದಿನೇ ಹೆಚ್ಚಾಗುತ್ತಿದ್ದು ಜನರು ಸಾಗರೋಪಾದಿಯಲ್ಲಿ ಹರಕೆ ಒಪ್ಪಿಸಲು ಬರುತ್ತಿದ್ದಾರೆ. ಬೀಗರ ಔತಣಗಳು ಸಹ ಇಲ್ಲಿ ನಡೆಯುತ್ತಿವೆ. ಚಂದಗಾನಹಳ್ಳಿ ಅಮ್ಮನನ್ನು ಚನ್ನಗಾನಮ್ಮ ಎಂತಲೂ ಕರೆಯುತ್ತಾರೆ. ಜನಮರಳೋ ಜಾತ್ರೆಮರಳೋ ಎಂಬಂತೆ ಈ ದೇವಸ್ಥಾನದಲ್ಲಿ ಪ್ರಾಣಿ ಬಲಿಗಳು ನಡೆಯುತ್ತಿವೆ. ಈ ದೇವರು ಕಾಳಿಮಾತೆ ಎಂತಲೂ ಕರೆಯಲ್ಪಡುತ್ತಿದ್ದು ಪಾರ್ವತಿಯ ಅವತಾರವಾಗಿದೆ ಎಂದೂ ಭಕ್ತರು ನಂಬಿದ್ದಾರೆ.

**ಹೇಮಗಿರಿಯ ಪಕ್ಷಿಧಾಮ:** ಭೃಗುಮುನಿಗಳ ತಪೋಕ್ಷೇತ್ರವಾದ ಹೇಮಗಿರಿ ಬೆಟ್ಟದ ತಪ್ಪಲಿನಲ್ಲಿ ಹೇಮಾವತಿಯು ಪಶ್ಚಿಮವಾಹಿನಿಯಾಗಿ ಹರಿಯುವ ಸ್ಥಳದಲ್ಲಿ ಚಿಕ್ಕದಾದ ದ್ವೀಪವೊಂದನ್ನು ಸೃಷ್ಟಿಸಿದೆ. ಈ ದ್ವೀಪವೂ ಪಕ್ಷಿಗಳಿಗೆ ಕೇಂದ್ರವಾಗಿದೆ. ಪ್ರಪಂಚದ ನಾನಾ ಭಾಗಗಳಿಂದ ವಿವಿಧ ಜಾತಿಯ ಪಕ್ಷಿಗಳು ಇಲ್ಲಿ ವಲಸೆ ಬರುತ್ತವೆ. ಹೀಗೆ ವಲಸೆ ಬಂದ ಪಕ್ಷಿಗಳು ಮೂರು ನಾಲ್ಕು ತಿಂಗಳುಗಳ ಕಾಲ ನೆಲೆನಿಂತಿರುತ್ತವೆ. ಈ ಸಂದರ್ಭದಲ್ಲಿ ದಿನಬೆಳಗಾದಾಗ ಮತ್ತು ಸಂಜೆಯ ಸಮಯದಲ್ಲಿ ಹಕ್ಕಿಗಳ ನಿನಾದ ಕೇಳಲು ಆನಂದವೋ ಆನಂದ. ಶ್ರೀರಂಗಪಟ್ಟಣದ ರಂಗನತಿಟ್ಟು ಪಕ್ಷಿಧಾಮದಂತೆಯೇ ಇದು ಪಕ್ಷಿಗಳಿಗೆ ಅತ್ಯುತ್ತಮ ಧಾಮವಾಗಿದ್ದರೂ ಇದನ್ನು ಅಭಿವೃದ್ಧಿಪಡಿಸುವತ್ತಾ ಸರ್ಕಾರವಾಗಲೀ ಸ್ಥಳೀಯರಾಗಲಿ ಗಮನ ಹರಿಸಿರುವುದಿಲ್ಲ. ಇಲ್ಲಿಗೆ ಬರುವ ಪ್ರವಾಸಿಗರಿಗೂ ಸಹ ಈ ಪಕ್ಷಿಧಾಮದ ಮಾಹಿತಿ ಲಭ್ಯವಿರುವುದಿಲ್ಲ ಮತ್ತು ಇಲ್ಲಿಗೆ ಸಾಗಿ ಹೋಗಲು ನದಿಯಲ್ಲಿ ತೆಪ್ಪಗಳು ಸಹ ಅಷ್ಟಾಗಿ ದೊರಕದ ಕಾರಣ ಇದು ಎಲೆಮರೆಯ ಕಾಯಿಯಂತೆಯೇ ಉಳಿದಿರುತ್ತದೆ.

**ಸಕ್ಕರೆ ಕಾರ್ಖಾನೆ:** ಹೇಮಗಿರಿ ಕ್ಷೇತ್ರದಿಂದ ಅನತಿ ದೂರದಲ್ಲಿ ಅಂದರೆ ಮಾಕವಳ್ಳಿ ಗ್ರಾಮದ ಬಳಿಯಲ್ಲಿ (ಹೇಮಗಿರಿಯಿಂದ ಸುಮಾರು ೫ ಕಿಲೋಮೀಟರ್ ದೂರ) ೧೯೯೯–೨೦೦೦ ದಂದು ಸರ್ಕಾರದ ಜೊತೆಯೊಂದಿಗೆ ಐ.ಸಿ.ಎಲ್.ಕಂಪನಿಯ ಸಹಭಾಗಿತ್ವದೊಂದಿಗೆ ಸಕ್ಕರೆ ಕಾರ್ಖಾನೆಯನ್ನು ತೆರೆಯಲಾಗಿದ್ದು, ಈ ಭಾಗದಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆಯುವ ಕಾರಣದಿಂದ ಸಾಗಾಣಿಕೆಗೆ ಅನುಕೂಲಕರವಾಗುವಂತೆ ಈ ಕಾರ್ಖಾನೆ ತೆರೆಯಲಾಯಿತು. ಅದರಂತೆ ವಾರ್ಷಿಕವಾಗಿ ಉತ್ತಮವಾದ ಪ್ರಮಾಣದ ಗುಣಮಟ್ಟದ ಸಕ್ಕರೆಯನ್ನು ಉತ್ಪಾದನೆ ಮಾಡಲಾಗುತ್ತಿದೆ. ೨೦೦೮ರಲ್ಲಿ

ಈ ಕಾರ್ಖಾನೆಗೆ ಐಸಿಎಲ್ ಸಕ್ಕರೆ ಕಾರ್ಖಾನೆಯಿಂದ ಕೋರಮಂಡಲ್ ಸಕ್ಕರೆ ಕಾರ್ಖಾನೆ ಎಂಬ ಹೆಸರನ್ನು ಬದಲಾಯಿಸಿಕೊಂಡಿದೆ.

**ಜಲವಿದ್ಯುತ್ ಉತ್ಪಾದನಾ ಕೇಂದ್ರ:** ತಪೋಕ್ಷೇತ್ರ ಹೇಮಗಿರಿಯ ಅಣೆಕಟ್ಟಿನ ಪಕ್ಕದಲ್ಲಿಯೇ ೨೦೦೩ ರಲ್ಲಿ ಹೈದರಾಬಾದ್ ತ್ರಿಶೂಲ್ ಪವರ್ ಪ್ರೈವೇಟ್ ಲಿಮಿಟೆಡ್‌ರವರ ವತಿಯಿಂದ ಜಲವಿದ್ಯುತ್ ಉತ್ಪಾದನಾ ಕೇಂದ್ರವನ್ನು ತೆರೆಯಲಾಗಿದೆ. ಇಲ್ಲಿ ಯೂನಿಟ್-೧ ಮತ್ತು ಯೂನಿಟ್-೨ ಎಂಬ ಘಟಕಗಳಿದ್ದು ಪ್ರತಿಗಂಟೆಗೆ ೩ ಮೆಗಾವ್ಯಾಟ್‌ನಂತೆ ಪ್ರತಿದಿನಕ್ಕೆ ೪೮,೦೦೦ ಯೂನಿಟ್‌ಗಳಷ್ಟು ವಿದ್ಯುತ್ತನ್ನು ಉತ್ಪಾದನೆ ಮಾಡುವುದರ ಮೂಲಕ ಕೆ.ಪಿ.ಟಿ.ಸಿ.ಎಲ್‌ಗೆ ಸರಬರಾಜು ಮಾಡುತ್ತಿದೆ. ಇದಲ್ಲದೆ ಇದೇ ನದಿಯ ಮುಂದಿನ ಹರಿಯುವಿಕೆಯ ಪಾತ್ರದಲ್ಲಿ ಅಂದರೆ ಈ ಉತ್ಪಾದನಾ ಕೇಂದ್ರದಿಂದ ನಾಲ್ಕು ಕಿಲೋಮೀಟರ್ ದೂರದಲ್ಲಿ ಮತ್ತೊಂದು ಜಲವಿದ್ಯುತ್ ಉತ್ಪಾದನಾ ಕೇಂದ್ರವನ್ನು ಇತ್ತೀಚಿನ ವರ್ಷಗಳಲ್ಲಿ ಅಂದರೆ ೨೦೦೮ ರಲ್ಲಿ ಕಾವೇರಿ ಪವರ್‌ಸ್ಟೇಷನ್‌ನ ವತಿಯಿಂದ ಸ್ಥಾಪನೆ ಮಾಡಲಾಗಿದ್ದು ಅದು ಸಹ ಪ್ರತಿನಿತ್ಯವಾಗಿ ೪೮,೦೦೦ ಯೂನಿಟ್‌ಗಳಷ್ಟು ವಿದ್ಯುತ್ತನ್ನು ಉತ್ಪಾದನೆ ಮಾಡಿ ಕೆ.ಪಿ.ಟಿ.ಸಿ.ಎಲ್‌ಗೆ ಸರಬರಾಜು ಮಾಡುತ್ತಿದೆ. ಹೀಗೆ ಭೃಗು ತಪೋಕ್ಷೇತ್ರವು ವಿದ್ಯುಚ್ಛಕ್ತಿಯ ಉತ್ಪಾದನೆ-ಯಲ್ಲಿ ಮಹತ್ವ ಪಡೆದುಕೊಂಡಿದೆ.

**ಚಿನ್ನ ಮತ್ತು ಬೆಳ್ಳಿಯ ನಿಕ್ಷೇಪಗಳು:** ಹೇಮಗಿರಿ ಎಂದರೆ ಚಿನ್ನದಗಿರಿ ಎಂದರ್ಥ. ಈ ಹೇಮಗಿರಿ ಪರ್ವತದಲ್ಲಿ ಹಾಗೂ ಸುತ್ತಮುತ್ತಲೂ ಚಿನ್ನದ ನಿಕ್ಷೇಪಗಳಿವೆ ಎಂಬ ಮಾಹಿತಿ ಲಭ್ಯವಾಗಿತ್ತು. ಅಲ್ಲದೆ ಈ ಬೆಟ್ಟದಿಂದ ಅನತಿ ದೂರದಲ್ಲಿನ ರಜತಬೆಟ್ಟ (ಬೆಳ್ಳಿಬೆಟ್ಟ) ದಲ್ಲಿಯೂ ಸಹ ಬೆಳ್ಳಿಯ ನಿಕ್ಷೇಪಗಳಿವೆ ಎಂಬ ವರದಿಯನ್ನು ೧೯೭೬ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ಕಾಲದಲ್ಲಿ ಕೇಂದ್ರಸರ್ಕಾರ ಸರ್ವೇ ನಡೆಸಿದ್ದು ಬೆಳ್ಳಿಯು ಬಲಿತಿಲ್ಲವೆಂದೂ ಹಾಗೆಯೇ ಬಿಟ್ಟಿರುತ್ತಾರೆ.

# ಅಧ್ಯಾಯ– ೭

## ಹೇಮಗಿರಿಯ ಅಭಿವೃದ್ಧಿಯಲ್ಲಿ ಪಾಲ್ಗೊಂಡ ಮಹನೀಯರು

**ಅರ್ಚಕ ಬಿ. ರಂಗಸ್ವಾಮಿಭಟ್ಟರು:** ಪುರಾತನ ಕಾಲದಿಂದಲೂ ಕನ್ನಡ ನಾಡು ತನ್ನದೇ ಆದ ಸಂಸ್ಕೃತಿ, ಕಲೆ, ಸಾಹಿತ್ಯ, ಸಂಗೀತ, ಶಿಲ್ಪಕಲೆಗೆ ಹೆಸರಾದ ತವರೂರು ಅಲ್ಲದೆ ವಿದ್ಯುನ್ಮಣಿಗಳನ್ನು ಬೆಳೆಸಿದ ಸಿಹಿನಾಡಾಗಿದೆ. ಅಂತಹವರ ಸಾಲಿನಲ್ಲಿ ಜನಪದ ಸಾಹಿತಿಗಳಲ್ಲಿ ಶ್ರೇಷ್ಠರಾದಂತಹ ಅರ್ಚಕ ಬಿ.ರಂಗಸ್ವಾಮಿಭಟ್ಟರು ಪ್ರಸಿದ್ಧರಾದವರು. ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಪಶ್ಚಿಮ ದಿಕ್ಕಿಗೆ ೧೦ ಕಿಲೋಮೀಟರ್ ದುರದ ಸುವರ್ಣಗಿರಿ (ಹೇಮಗಿರಿ)ಯ ಸಮೀಪದ ಗ್ರಾಮವೇ ಬಂಡಿಹೊಳೆ. ಇದೇ ರಂಗಸ್ವಾಮಿಭಟ್ಟರ ಹುಟ್ಟೂರು. ಇವರು ೧೯೦೫ರ ಅಕ್ಟೋಬರ್‌ನಲ್ಲಿ ಜನಿಸಿದರು. ಮೈಸೂರಿನ ವೆಸ್ಲಿಯನ್ ಮಿಷನ್ ಇಂಗ್ಲಿಷ್ ಶಾಲೆಯಲ್ಲಿ ಇಂಗ್ಲಿಷ್ ಭಾಷೆಯ ಮೊದಲ ಪಾಠಗಳನ್ನು ಕಲಿತರು. ತರುವಾಯ ಸದ್ವಿದ್ಯಾ ಶಾಲೆಯಲ್ಲಿ ಸಂಸ್ಕೃತ ಶಿಕ್ಷಣ ಪಡೆದರು. ಈ ಸಂದರ್ಭದಲ್ಲಿ ವಿಶ್ವ ಕರ್ನಾಟಕ ಪತ್ರಿಕೆಯಲ್ಲಿ ಬಂದಂತಹ ತಿ.ತ.ಶರ್ಮಾ ಅವರ ಕರೆಯೊಂದರಿಂದ ತಮ್ಮ ದಿಕ್ಕನ್ನು ಬದಲಿಸಿಕೊಂಡ ಭಟ್ಟರು ಅಪೂರ್ವವೆನಿಸುವ ಜಾನಪದ ಸಾಹಿತ್ಯವನ್ನು ಸಂಗ್ರಹಿಸಲು, ಸಂರಕ್ಷಿಸಲು ಮುಂದಾದರು. ೧೯೩೧ರಲ್ಲಿ ಪ್ರಕಟವಾದ ಹಲಸಂಗಿ ಸೋದರರ "ಗರತಿಹಾಡು" ಉತ್ತರ ಕರ್ನಾಟಕದಲ್ಲಿ ಮೊದಲು ಪ್ರಚಾರಕ್ಕೆ ಬಂದ ತರುವಾಯ ೧೯೩೭ರಲ್ಲಿ ಅರ್ಚಕ ಬಿ.ರಂಗಸ್ವಾಮಿ ಎಂದೇ ಮುಂದೆ ಖ್ಯಾತರಾದ ಇವರಿಂದ "ಹುಟ್ಟಿದಹಳ್ಳಿ ಹಳ್ಳಿಯ ಹಾಡು" ಕೃತಿಯು ಅಂದಿನ ಹಳೆಯ ಮೈಸೂರು ಪ್ರಾಂತ್ಯಕ್ಕೆ ಮೊದಲನೆಯದೆನಿಸಿತು. ಮಹಾತ್ಮಗಾಂಧೀಜಿಯವರ ಕರೆಗೆ ಓಗೊಟ್ಟು ಸಮಾಜ ಸೇವಾ ಕಾರ್ಯಕ್ಕೂ ಮುಂದಾದ ಭಟ್ಟರು ಊರಲ್ಲಿ ಆಶ್ರಮವೊಂದನ್ನು ಸ್ಥಾಪಿಸಿ ಹತ್ತಾರು ಮಂದಿಗೆ ಆಶ್ರಯವಿತ್ತರು. 'ಟಿನೆಂಟ್' ಕಾಯ್ದೆ ಬಂದಾಗ ಇದ್ದ ಭೂಮಿಯನ್ನು ಕಳೆದುಕೊಂಡು ನಗುನಗುತ್ತಾ ಜಾನಪದ ಸಾಹಿತ್ಯದ ಸೇವೆ ನಡೆಸಿದರು. ಎಲೆ ಮರೆಯ ಹೂವಾಗಿಯೇ ಬದುಕಿದ ಭಟ್ಟರು ಈ ಹಿಂದೆ ಆಡಿದ ಮಾತುಗಳು ಹೀಗಿವೆ. "ಅದು ಇಪ್ಪತ್ತರ ದಶಕ. ಮೈಸೂರಿನಲ್ಲಿ ಸಂಸ್ಕೃತ ವ್ಯಾಸಂಗ ಮಾಡುತ್ತಿದ್ದ ಕಾಲ, ವಿಶ್ವಕರ್ನಾಟಕ ಅನ್ನುವ ಪತ್ರಿಕೆಯಲ್ಲಿ ತಿ.ತಾ.ಶರ್ಮಾ ಅವರು 'ಪಾಮರರ ಸಾಹಿತ್ಯವನ್ನು ನಿರ್ಲಕ್ಷಿಸಿರಿ ಜೋಕೆ? ಎಂದು ಯುವಕರಿಗೆ ಕರೆಯಿತ್ತದ್ದು ನಾನು ಹಳ್ಳಿಗೆ ಹಿಂದಿರುಗುವಂತೆ ಮಾಡಿತು" ಹಳ್ಳಿಗೆ ಹಿಂತಿರುಗಿ

ಪಾಮರರ ಸಾಹಿತ್ಯ ಸಂಗ್ರಹ ಕಾರ್ಯಕ್ಕೆ ಮುಂದಾದಾಗ ಸಾಂಪ್ರದಾಯಸ್ಥರ ಪ್ರತಿಭಟನೆ ಎದುರಾಯಿತು. "ಓದಲಿಕ್ಕೆ ಕೈಲಾಗದೆ ಇಂತಹ ನಾಟಕ ಆಡ್ತಿದ್ದಾನೆ" ಎಂಬ ಗೇಲಿ ಮಾತೂ ಕೇಳಿ ಬಂದಿತು.

ಶಾಲೆಗೆ ಬರುತ್ತಿದ್ದ ಬಿ.ಎಂ.ಶ್ರೀ, ತೀನಂ.ಶ್ರೀ. ಮುದವೀಡು ಕೃಷ್ಣರಾಯರು, ಆಲೂರುವೆಂಕಟರಾಯರು, ಪ್ರೊ. ಹಿರಿಯಣ್ಣ ಮೊದಲಾದವರು ಕನ್ನಡದ ದುಃಸ್ಥಿತಿ ಬಗ್ಗೆ ಜಾನಪದ ಸಾಹಿತ್ಯ ರಕ್ಷಣೆಯ ಬಗ್ಗೆ ಆಡುತ್ತಿದ್ದ ನುಡಿಗಳು ಸ್ಫೂರ್ತಿ ತುಂಬಿದವು. ಈ ಮಧ್ಯೆ ಮಹಾತ್ಮಾ ಗಾಂಧಿಯವರು ಬೆಳಗಾವಿಯ ಅಧಿವೇಶನದಲ್ಲಿ ಯುವಕರು ಹಳ್ಳಿಗಳ ಉದ್ಧಾರಕ್ಕೆ, ಬಡಜನರ ಕಲ್ಯಾಣಕ್ಕೆ ಶ್ರಮಿಸಬೇಕೆಂದು ಕರೆಯಿತ್ತದ್ದೂ ಬದುಕಿನ ದಿಕ್ಕನ್ನು ಬದಲಿಸಿತು.

ಭಟ್ಟರು ಗ್ರಾಮದಲ್ಲಿ ಸ್ಥಾಪಿಸಿದ ಆಶ್ರಮಕ್ಕೆ ಒಮ್ಮೆ ದಿವಾನ್ ಮಿರ್ಜಾ ಇಸ್ಮಾಯಿಲ್ ಅವರು ಅನಿರೀಕ್ಷಿತವಾಗಿ ಭೇಟಿ ನೀಡಿದರು. ಚರಕದಿಂದ ನೂಲು ತೆಗೆಯುವುದು, ಸ್ವಸಹಾಯ ಪದ್ಧತಿ.....ಇದೆಲ್ಲವನ್ನು ಕಂಡು ಮೆಚ್ಚುಗೆ ಸೂಚಿಸಿದರು.

"ಭಟ್ಟರು ಹುಟ್ಟಿದ ಹಳ್ಳಿ"– ರಾಮಾಯಣದ ಕೆಲವು ವಿಚಾರಗಳ ಕೃತಿಯನ್ನು ಪ್ರಕಟಿಸಿದ ಕಾಲ ಅಂದರೆ ಅದು ಕಷ್ಟದ ಕಾಲ. ಹದಿನಾರಾಣೆ ಅರ್ಥಾತ್ ಒಂದು ರೂಪಾಯಿ ಸಂಪಾದಿಸೋದು ಅಂದರೆ ಬಹಳ ಕಷ್ಟದ ಕೆಲಸ. ಹಸ್ತ ಪ್ರತಿ ಹೊತ್ತು ಅಲೆದಾಡಿದರೂ ಕೊನೆಗೆ ಶಾಂತರಾಜಶಾಸ್ತ್ರಿಗಳು ಸಹಾಯಕ್ಕೆ ಮುಂದಾದರು. ತಿ.ತಾ.ಶರ್ಮರು "ಹಳ್ಳಿಯ ಬದುಕಿನ ರತ್ನದರ್ಪಣ" ಎಂದು ಈ ಕೃತಿಯನ್ನು ಕರೆದರು.

ತೀ.ನಂ.ಶ್ರೀ. ಇದೊಂದು ಜಾನಪದ ವಿಶ್ವಕೋಶ ಎಂದು ಹೊಗಳಿದರು. ಆದರೆ ಪ್ರತಿಗಳು ಮಾತ್ರ ಮಾರಾಟವಾಗಲಿಲ್ಲ. ಹಾಕಿದ ಕಾಸು ವಾಪಸು ಬರಲಿಲ್ಲ. ಹೀಗೆ ಅವರ ಜೀವನದ ಬದುಕಿನ ಕಷ್ಟದ ಅನುಭವಗಳನ್ನು ಬರೆದಿದ್ದಾರೆ ತಮ್ಮ ಕೃತಿಯಲ್ಲಿ. ಪಾಮರರ ಸಾಹಿತ್ಯವನ್ನು ಜೋಪಾನ ಮಾಡಿದ ಭಟ್ಟರು ಅರ್ಚಕರಾಗಿ, ಅನುಭವಿಗಳಾಗಿ, ಜನಪದ ಸಂಪತ್ತನ್ನು ಸಮೃದ್ಧಿಗೊಳಿಸಿದರು. ಅವರ ಮರಣಾನಂತರ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಅವರ "ಹುಟ್ಟಿದ ಹಳ್ಳಿ" ಕೃತಿಯನ್ನು ಪ್ರಕಟಿಸಿತು. ಇದು ಅವರ ಸಾರ್ಥಕ ಬದುಕಿಗೆ ನೀಡಿದ ಕಾಣಿಕೆಯಾಗಿದೆ.

"ಅರ್ಚಕ' ರಂಗಸ್ವಾಮಿ ಭಟ್ಟರು ಎಂದೂ ಖ್ಯಾತಿಯಾಗಲು ಕಾರಣ ಇವರು ಶ್ರೀ ಕಲ್ಯಾಣವೆಂಕಟರಮಣಸ್ವಾಮಿಯ ಭಕ್ತರಾಗಿದ್ದು ಸ್ವಾಮಿಯು ಇವರ ಕನಸಿನಲ್ಲಿ

ಬಂದು ಪೂಜಾ ಕಾರ್ಯಗಳನ್ನು ಕೈಗೊಳ್ಳುವಂತೆ ಆಜ್ಞಾಪಿಸಲಾಗಿ ವೆಂಕಟರಮಣನಿಗೆ ಅರ್ಚಕರಾಗಿ ಹೇಮಗಿರಿಯ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಸದಾಕಾಲ ಬೆಟ್ಟದರಂಗನ ಪೂಜೆ ಮಾಡುತ್ತಾ ಸಾಹಿತ್ಯ, ಶಿಕ್ಷಣ ಕ್ಷೇತ್ರಗಳಲ್ಲೂ ಆಸಕ್ತಿ ಮೂಡಿಸಿಕೊಂಡದ್ದು ಇವರ ಬಹುಮುಖ ಪ್ರತಿಭೆಗಳಿಗೆ ಸಾಕ್ಷಿಯಾಗಿದೆ. ಇಷ್ಟು ಸಾಹಸಗಳನ್ನು ಗೈದ ಅರ್ಚಕ ರಂಗಸ್ವಾಮಿ ಭಟ್ಟರು ೨೬-೦೯-೧೯೯೧ರಲ್ಲಿ ಪ್ರಕೃತಿಯಲ್ಲಿ ಸೇರಿ ಹೋದರು.

**ಕೆ.ಪಿ.ದೊಡ್ಡೇಗೌಡರು:** ಹೇಮಗಿರಿಯ ಅಭಿವೃದ್ಧಿಯಲ್ಲಿ ಪಾಲ್ಗೊಂಡ ಮಹಾನೀಯರಲ್ಲಿ ಕೆ.ಪಿ.ದೊಡ್ಡೇಗೌಡರ ಹೆಸರು ಚಿರಸ್ಥಾಯಿಯಾಗಿದೆ. ಶ್ರೀಯುತರು ದಿನಾಂಕ ೧೫-೦೫-೧೯೧೩ರಂದು ಶ್ರೀಮಾನ್ ಪುಟ್ಟಚನ್ನೇಗೌಡ ಹಾಗೂ ಶ್ರೀಮತಿ ನಿಂಗಮ್ಮನವರ ಪುತ್ರರಾಗಿ ಜನಿಸಿದರು. ಬಾಲ್ಯದಿಂದ ಕ್ರಿಯಾಶೀಲಗುಣವನ್ನು ಬೆಳೆಸಿಕೊಂಡಿದ್ದ ಇವರು ವಿದ್ಯಾಭ್ಯಾಸದಲ್ಲಿ ಬಹಳ ಮುಂದಿದ್ದರು. ಅಂದಿನ ಕಾಲದಲ್ಲೇ ಇಂಟರ್-ಮೀಡಿಯಟ್ ವ್ಯಾಸಂಗವನ್ನು ಪೂರ್ಣಗೊಳಿಸಿ ನಗರಪ್ರದೇಶದ ಆಕರ್ಷಣೆ ಯಿಂದ ಅಲ್ಲೇ ಉದ್ಯೋಗದಲ್ಲಿರುತ್ತಾರೆ. ಆದರೆ ಇವರ ತಂದೆಯವರು ಜಮೀನ್ದಾರರಾದ ಕಾರಣ-ದಿಂದಾಗಿ ಮಗನನ್ನು ಗ್ರಾಮಕ್ಕೆ ಹಿಂತಿರುಗಿ ಕರೆಸಿಕೊಂಡು ತಿಮ್ಮಾಜಮ್ಮ ಎಂಬುವವರೊಡನೆ ವಿವಾಹ ಮಾಡಿಸಿಬಿಡುತ್ತಾರೆ. ಅನಂತರ ಗ್ರಾಮದಲ್ಲೇ ನೆಲೆಗೊಂಡು ಬೇಸಾಯದಲ್ಲಿ ತೊಡಗುವುದರ ಜೊತೆ - ಜೊತೆಗೆ ಸಮಾಜ ಸೇವಾ ಕಾರ್ಯದಲ್ಲೂ ತೊಡಗುತ್ತಾರೆ.

ನೊಂದವರ ಪಾಲಿಗೆ ಆಶಾಜ್ಯೋತಿಯಾಗಿದ್ದ ಇವರು ಬಡವ ಶೂದ್ರರೆನ್ನದೆ ಅವರಿಗೆ ತಮ್ಮ ಕೈಲಾದ ಸಹಾಯವನ್ನು ಮಾಡತೊಡಗುತ್ತಾರೆ. ಬೇಟೆಗಾರಿಕೆ ಇವರ ಪ್ರಧಾನ ಹವ್ಯಾಸವಾಗಿದ್ದು ಅಂದಿನ ಕಾಲದಲ್ಲಿ ಉತ್ತಮ ಬೇಟೆಯನ್ನಾಡುತ್ತಿದ್ದರು. ಜಾತಿಯಲ್ಲಿ ಒಕ್ಕಲಿಗರಾಗಿದ್ದು ಶೂದ್ರರಾದರು ಸಂಸ್ಕೃತ ಶ್ಲೋಕಗಳನ್ನು ಬಹಳ ಬಲ್ಲವರಾಗಿದ್ದರು. ಇವರು ಛಲವಾದಿ ಗುಣವನ್ನು ಬೆಳೆಸಿಕೊಂಡಿದ್ದು ಬಹಳ ಧೈರ್ಯವಂತರಾಗಿದ್ದರು.

ಕುಪ್ಪಳ್ಳಿ ಗ್ರಾಮದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಾಹ್ಮಣರದೇ ಕಾರುಬಾರು ಅಂದರೆ ಅವರುಗಳು ಬಹಳ ಬುದ್ಧಿಶಾಲಿಗಳು ಹಾಗೂ ಪ್ರಭಾವಶಾಲಿಗಳು ಆಗಿದ್ದರು. ಅಂತಹ ಸಂದರ್ಭದಲ್ಲಿ ಶೂದ್ರವರ್ಗಕ್ಕೆ ಸೇರಿದ ದೊಡ್ಡೇಗೌಡರು ಮಂಡಲಪಂಚಾಯ್ತಿ

ಚುನಾವಣೆಯಲ್ಲಿ ಸ್ಪರ್ಧಿಸಿ ಬ್ರಾಹ್ಮಣರ ವಿರುದ್ಧ ಗೆಲವು ಸಾಧಿಸಿದರು. ಬ್ರಾಹ್ಮಣ ಹಾಗೂ ಶೂದ್ರವರ್ಗದಲ್ಲಿದ್ದ ಅಸಮತೋಲನವನ್ನು ನಿವಾರಿಸಿದರು. ಕುಡಿಯುವ ನೀರಿಗೆ ಅಭಾವವಿದ್ದಾಗ ತೆರೆದ ಬಾವಿಗಳನ್ನು ತೋಡಿಸಿದರು.

ವ್ಯವಸಾಯ ಸಹಕಾರ ಸಂಘದ ನೆರವಿನಿಂದ ಸೊಸೈಟಿಯನ್ನು ತಂದರು. ಅಲ್ಲದೆ ಕಿಕ್ಕೇರಿಯಿಂದ ಲಕ್ಷ್ಮೀಪುರ ಹಾಗು ಬಂಡಿಹೊಳೆಯಿಂದ ಕುಪ್ಪಹಳ್ಳಿಗೆ ಮುಖ್ಯರಸ್ತೆಯನ್ನು ಇವರು ಛೇರ್ಮನ್‌ರಾಗಿದ್ದ ಅಧಿಕಾರದ ಅವಧಿಯಲ್ಲಿ ಮಾಡಿಸಿ ಅದರ ಉದ್ಘಾಟನೆಯನ್ನು ಅಂದಿನ ಘನವೆತ್ತ ರಾಜ್ಯಪಾಲರಾಗಿದ್ದ ಮೈಸೂರಿನ ರಾಜವಂಶಸ್ಥರಾದಂತಹ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರನ್ನು ಕರೆಸಿ ಉದ್ಘಾಟನೆಯನ್ನು ಮಾಡಿಸಿದರು. ಇವರ ಮತ್ತೊಂದು ಪ್ರಮುಖವಾದ ಸಾಧನೆ ಯೆಂದರೆ ೧೯೬೩-೬೪ನೇ ಇಸವಿಯಲ್ಲಿ ಶ್ರೀರಂಗನಾಥ ಸನ್ನಿಧಿಯಲ್ಲಿ ಸುತ್ತಮುತ್ತಲ ಗ್ರಾಮಸ್ಥರ ನೆರವಿನೊಂದಿಗೆ ಶ್ರೀಯುತ ಜಿ.ಪಿ.ಶಿವರಾಂ ಗದ್ದೆಹೊಸೂರು ಇವರ ಅಧ್ಯಕ್ಷತೆಯಲ್ಲಿ ಪ್ರಥಮಬಾರಿಗೆ ಗುಡಿಸಲಿನಲ್ಲಿ ಶ್ರೀ ಕಲ್ಯಾಣ ವೆಂಕಟರಮಣಸ್ವಾಮಿ ಪ್ರೌಢಶಾಲೆಯನ್ನು ಪ್ರಾರಂಭಿಸಿ ತಮ್ಮ ಜೀವಿತಾವಧಿಯವರೆಗೂ ಶಾಲಾ ಸಲಹಾ ಸಮಿತಿಯ ಸದಸ್ಯರಾಗಿ ಕಾರ್ಯವನ್ನು ನಿರ್ವಹಿಸಿದ್ದರು. ಇಂತಹ ದೀಪವೂ ೧೪-೦೫-೨೦೦೧ರಲ್ಲಿ ನಂದಿಹೋಯಿತು.

**ಜಿ.ಪಿ.ಶಿವರಾಂ:** ಹೇಮಗಿರಿಯ ಗುರುಕುಲದ ಹರಿಕಾರರೆನಿಸಿರುವ ಜಿ.ಪಿ.ಶಿವರಾಂರವರು ಕೆ.ಆರ್.ತಾಲ್ಲೂಕಿನ ಗದ್ದೆಹೊಸೂರು ಗ್ರಾಮದಲ್ಲಿ ಪುಟ್ಟಣ್ಣಗೌಡ ಮತ್ತು ಕಾಳಮ್ಮರವರ ಪುತ್ರರಾಗಿ ಜನಿಸಿದರು. ಇವರ ತಂದೆಯವರು ಸಿವಿಲ್ ಇಂಜಿನಿಯರ್‌ರಾಗಿದ್ದು ಅಂದೂ ಮೈಸೂರಿನ ಸಿಟಿ ಮಾರ್ಕೆಟ್‌ನ ಕಟ್ಟಡ ಮತ್ತು ಟೌನ್‌ಹಾಲ್‌ನ ಕಟ್ಟಡಗಳನ್ನು ಇವರೇ ನಿರ್ಮಾಣಮಾಡಿದ್ದರು. ಶಿವರಾಂ ಅವರು ಪ್ರಾಥಮಿಕ ಶಿಕ್ಷಣ ಮುಗಿಸಿದ ಅನಂತರದಲ್ಲಿ ಮೈಸೂರಿನಲ್ಲಿ ಮೆಟ್ರಿಕ್ಯುಲೇಷನ್, ಬಿ.ಎ., ಬಿ.ಟಿ. ಶಿಕ್ಷಣವನ್ನು ಪಡೆದುಕೊಂಡು ಮೊದಲಿಗೆ ಹೊಳೆನರಸೀಪುರದ ಪ್ರೌಢಶಾಲೆಯಲ್ಲಿ ಸಹಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಅನಂತರ ಶಾಲಾ ತನಿಖಾಧಿಕಾರಿಗಳಾಗಿ, ಮಂಡ್ಯದ ಸರ್ಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ಬಡ್ತಿ ಪಡೆದರು. ಬೆಂಗಳೂರಿನಲ್ಲಿ ಡಿ.ಪಿ.ಐ. ನಲ್ಲಿ ಆಪ್ತ ಸಹಾಯಕರಾಗಿ ಅನಂತರ ಸೆಕ್ರೆಟರಿ ಸೆಕೆಂಡರಿ ಎಜುಕೇಷನ್ ಬೋರ್ಡ್‌ನಲ್ಲೂ ಕೆಲಸ ನಿರ್ವಹಿಸಿದರು. ಡಿ.ಡಿ.ಪಿ.ಐ ಮತ್ತು ಜಂಟಿ ಆಯುಕ್ತರ

ಹುದ್ದೆಗಳನ್ನು ಸಹ ಅಲಂಕರಿಸಿ ನಿವೃತ್ತರಾದರು. ಇವರು ನಿವೃತ್ತಿ ಪಡೆದು ತಮ್ಮ ಸ್ವಗ್ರಾಮವಾದ ಗದ್ದೆಹೊಸೂರಿನಲ್ಲೇ ಏನಾದರೂ ಸಾಧನೆ ಮಾಡಬೇಕೆಂದುಕೊಂಡು ಅಂದೂ ತಾವೂ (ಬಂಡಿಹೊಳೆಯ ಯಜಮಾನ್ ತಿಪ್ಪೇಗೌಡರ ಮಗಳು ನಂಜಮ್ಮರವರನ್ನು ವಿವಾಹವಾಗಿದ್ದರು) ಹೇಮಗಿರಿಯ ಪ್ರಶಾಂತ ವಾತಾವರಣ ಕಂಡು ಇಲ್ಲಿನ ಸುತ್ತಮುತ್ತಲ ಬಂಡಿಹೊಳೆ, ಲಕ್ಷ್ಮೀಪುರ, ಕುಪ್ಪಳ್ಳಿ, ಮಾಕವಳ್ಳಿ, ನಾಟನಹಳ್ಳಿ ಮೊದಲಾದ ಗ್ರಾಮಗಳ ಮಕ್ಕಳ ವಿದ್ಯಾಭ್ಯಾಸದ ಅನುಕೂಲಕ್ಕಾಗಿ ಗುರುಕುಲ ಸ್ಥಾಪನೆಗೆ ಮೂಲಕಾರಣಕರ್ತರಾಗಿ ಅವರ ಅಧ್ಯಕ್ಷತೆಯಲ್ಲೇ ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ವಿದ್ಯಾಸಂಸ್ಥೆ ಸ್ಥಾಪನೆ ಮಾಡಿದರು. ಅಲ್ಲದೆ ವಸತಿಗೃಹದ ವ್ಯವಸ್ಥೆಯನ್ನು ಸಹ ಮಾಡಿದರು. ಅನಂತರ ೧೯೬೩-೬೪ರಲ್ಲಿ ಸ್ಥಾಪನೆಯಾದ ಶಾಲೆಯು ೧೯೮೫-೮೬ರಲ್ಲಿ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠಕ್ಕೆ ಸೇರ್ಪಡೆಗೊಳಿಸುವಲ್ಲಿ ಜಿ.ಪಿ.ಶಿವರಾಂರವರೇ ಪ್ರಮುಖ ಕಾರಣರು. ಮಕ್ಕಳಿಗೆ ವಿದ್ಯಾಭ್ಯಾಸ ದೊರಕಿಸಿ-ಕೊಡಬೇಕೆಂಬ ಮಹಾಭಿಲಾಷೆಯಿಂದ ಸ್ಥಾಪನೆ ಮಾಡಲಾದ ಶಿಕ್ಷಣಸಂಸ್ಥೆಯಿಂದ ಹೇಮಗಿರಿಯು ಅಂದೂ ಮತ್ತಷ್ಟು ಶೈಕ್ಷಣಿಕ ಕೇಂದ್ರವಾಗಿ ಗುರುತಿಸಿಕೊಳ್ಳುವಲ್ಲಿ ಜಿ.ಪಿ.ಶಿವರಾಂರವರೇ ಪ್ರಮುಖ ಕಾರಣೀಭೂತರೆಂದರೆ ತಪ್ಪಾಗಲಾರದು.

ಹೀಗೆ ಈ ಮೇಲ್ಕಂಡವರಲ್ಲದೆ ಕುಪ್ಪಳ್ಳಿಯ ವೆಂಕಟರಮಣಯ್ಯನವರು, ಬಂಡಿಹೊಳೆಯ ಬಸವೇಗೌಡರು, ಲಕ್ಷ್ಮೀಪುರದ ನಂಜೇಗೌಡರು ಇವರೇ ಮೊದಲಾದವರು ಹೇಮಗಿರಿಯ ಅಭಿವೃದ್ಧಿಯಲ್ಲಿ ಪ್ರಮುಖರಾದಂತಹ ಪಾತ್ರವನ್ನು ವಹಿಸಿದ್ದಾರೆ.

# ಅಧ್ಯಾಯ- ೮

## ಅಧ್ಯಯನದ ಫಲಿತಗಳು

- ಜೀವಿಗಳು ವಾಸಮಾಡುವ ಏಕೈಕ ಗ್ರಹವೇ ಭೂಮಿ. ಭಾರತದೇಶ ಇಲ್ಲಿ ಭೌಗೋಳಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ವಿಶಿಷ್ಟವಾದ ಸ್ಥಾನ ಪಡೆದುಕೊಂಡಿರುವುದು ವಿಶೇಷ ಕರ್ನಾಟಕ ರಾಜ್ಯ ಭಾರತದ ಅವಿಭಾಜ್ಯ ಅಂಗವಾಗಿದ್ದು ಅದರ ಸಂಸ್ಕೃತಿಯ ಪರಂಪರೆಯು ವೈಭವೋಪೇತವಾಗಿದೆ ಎಂಬ ವಿಷಯ ನಮ್ಮ ಗಮನಕ್ಕೆ ಬಂದಿದೆ.
- ಕರ್ನಾಟಕ ಹಲವು ಸಾಮ್ರಾಜ್ಯಗಳ ತವರು ಮನೆಯಾಗಿದ್ದು ಅನೇಕ ಮನೆತನಗಳ ಗಣಿಯಾಗಿದೆ. ಶಿಲ್ಪಕಲೆಯ ತವರೂರಾಗಿದೆ. ಮಾಂಡವ್ಯ ಋಷಿಗಳ ತಪೋನಾಡು ಮಂಡ್ಯಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಹೇಮಗಿರಿ ಕ್ಷೇತ್ರ ಪ್ರಮುಖ ಪ್ರವಾಸಿ ತಾಣವಾಗಿದೆ.
- ಹೇಮಗಿರಿ ಸ್ಥಳನಾಮದ ಮಹತ್ವ, ವಿಶೇಷತೆ, ಅಲ್ಲಿನ ಬೆಟ್ಟ, ಗುಡ್ಡಗಳು, ಅಣೆಕಟ್ಟು, ಪಕ್ಷಿಧಾಮ, ಬೆಳ್ಳಿಬೆಟ್ಟದ ವಿಶೇಷತೆ, ಭೃಗುಮುನಿಗುಹೆ, ಕೋಡುಗಲ್ಲಿನ ದೃಶ್ಯ, ಅರಣ್ಯಸಂಪತ್ತು, ದನಗಳ ಜಾತ್ರೆ, ತೆಪ್ಪೋತ್ಸವ, ಇವೇ ಮೊದಲಾದವುಗಳ ಪ್ರಾಮುಖ್ಯತೆ ತಿಳಿಯಲಾಯಿತು.
- ಹೇಮಗಿರಿ ಕ್ಷೇತ್ರದ ಮಹತ್ವ ತಿಳಿದುಬರುತ್ತದೆ. ಭೃಗುಮುನಿ ಮಹರ್ಷಿಗಳು ಪಶ್ಚಿಮಾಭಿಮುಖವಾಗಿ ಹರಿಯುವ ಹೇಮಾವತಿ ನದಿಯ ಬಳಿ ನೆಲೆನಿಂತು ತಪಸ್ಸನ್ನು ಆಚರಿಸಿ ಶ್ರೀನಿವಾಸನನ್ನು ಮೆಚ್ಚಿಸಿ ಶ್ರೀ ಕಲ್ಯಾಣವೆಂಕಟರಮಣ ಸ್ವಾಮಿಯ ರೂಪದಲ್ಲಿ ದರ್ಶನ ನೀಡಿದನು.
- ಹೇಮ ಎಂದರೆ ಚಿನ್ನ ಎಂದರ್ಥ ಅಂದರೆ ಹೇಮಗಿರಿಯೆಂಬುದು ಚಿನ್ನದ ಬೆಟ್ಟ ಎಂಬರ್ಥ ಅಂದರೆ ಹೇಮಗಿರಿಯೆಂಬುದು ಚಿನ್ನದ ಬೆಟ್ಟ ಎಂಬರ್ಥ ಪಡೆದಿದೆ. ರತ್ನಗಿರಿ, ಸುವರ್ಣಗಿರಿ, ಕನಕಗಿರಿ, ಹೇಮಾದ್ರಿ, ಹೇಮಗಿರಿಯ ಪರ್ಯಾಯ ಸ್ಥಳನಾಮಗಳಾಗಿವೆ.
- ಹೇಮಗಿರಿಯ ಸುತ್ತಮುತ್ತಲಿನ ಊರುಗಳಾದ ಕುಪ್ಪಳ್ಳಿ, ನಾಟನಹಳ್ಳಿ, ಬಂಡಹೊಳೆ, ಲಕ್ಷ್ಮೀಪುರ ಹಾಗೂ ಬಿ.ಬಿ.ಕಾವಲ್ ಇವುಗಳ ಸಮೀಕ್ಷೆ ನಡೆಸಿ ತಿಳಿಯಲಾಯಿತು.

- ಹೇಮಾವತಿ ನದಿಯು ಚಿಕ್ಕಮಗಳೂರಿನ ಮೂಡಿಗೆರೆ ಬಳಿಯ ಬಲ್ಲಾಳರಾಯನ ದುರ್ಗದಲ್ಲಿ ಹುಟ್ಟಿ, ಹಾಸನ ಜಿಲ್ಲೆಯ ಮುಖಾಂತರ ಹರಿದು, ಮಂಡ್ಯಜಿಲ್ಲೆ ಪ್ರವೇಶಿಸಿ ಅನಂತರ ಮೈಸೂರು ಜಿಲ್ಲೆಯಲ್ಲಿ ಕಾವೇರಿ ನದಿಯನ್ನು ಸೇರುತ್ತದೆ.
- ೧೮೮೦ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ೪೧೫ ಮೀಟರ್‌ನ ಅಣೆಕಟ್ಟನ್ನು ಹೇಮಗಿರಿ ಬಳಿಯಲ್ಲಿ ಹೇಮಾವತಿ ನದಿಗೆ ಕಟ್ಟಲಾಗಿದೆ.
- ಹೇಮಗಿರಿ ಕ್ಷೇತ್ರವು ೧೭ ಮತ್ತು ೧೮ನೇ ಶತಮಾನದಲ್ಲಿ ಮೈಸೂರು ಸಂಸ್ಥಾನಕ್ಕೆ ಒಳಪಟ್ಟಿದ್ದು ಶ್ರೀ ವ್ಯಾಸರಾಯರು ಇಲ್ಲಿ ದನಗಳ ಜಾತ್ರೆಯನ್ನು ಪ್ರಾರಂಭಿಸಿದರೆಂಬ ಐತಿಹ್ಯವಿದೆ.
- ಕ್ರಿಸ್ತಶಕ ೧೯೫೩ರಲ್ಲಿ ಜಯಚಾಮರಾಜೇಂದ್ರ ಒಡೆಯರ್‌ರವರು ಹೇಮಗಿರಿ ಕ್ಷೇತ್ರಕ್ಕೆ ಭೇಟಿ ನೀಡಿದ್ದು ಅಂದಿನ ಕೆ.ಆರ್.ಪೇಟೆಯಿಂದ ಬಂಡಿಹೊಳೆ ಮಾರ್ಗದ ರಸ್ತೆಯನ್ನು ಉದ್ಘಾಟನೆ ಮಾಡಿ ಶಾಸನವೊಂದು ನೆಡೆಸಲಾಯಿತು. ಅದನ್ನು ಇಂದಿಗೂ ಕಾಣಬಹುದು.
- ಬಂಡಿಹೊಳೆಯ ಸಮೀಪದಲ್ಲಿ ಹೊಸಪಟ್ಣ ಎಂಬ ಕೋಟೆಯೊಂದನ್ನು ಹೈದರಾಲಿ ಮತ್ತು ಟಿಪ್ಪುರವರು ನಿರ್ಮಿಸಿರುವ ಪ್ರಾಕ್ತಾರಿತ್ರಿಕ ಆಧಾರಗಳು ಇಂದಿಗೂ ಕಂಡುಬಂದ ಮಾಹಿತಿ ಅರಿಯಲಾಯಿತು.
- ಹೇಮಗಿರಿಯ ಕಲ್ಯಾಣವೆಂಕಟರಮಣಸ್ವಾಮಿಯ ಕಲ್ಯಾಣ ಕಾರ್ಯಗಳು ಹೇಗೆ ಸಾಗಿದವೆಂಬ ಮಾಹಿತಿ ದೊರೆಯಿತು. ಭಕ್ತರು ಈ ಪ್ರದೇಶದಲ್ಲಿ ಒಳಿತನ್ನು ಪಡೆದುಕೊಂಡ ಉದಾಹರಣೆಗಳು ತಿಳಿದೆವು.
- ಭೃಗುಮುನಿ ಮಹರ್ಷಿಗಳು ಉತ್ತರಭಾರತದಿಂದ ದಕ್ಷಿಣಭಾರತಕ್ಕೆ ಬಂದು ಕಾವೇರಿ ನದಿಯ ಬಳಿ ಸ್ವಲ್ಪ ದಿನಗಳವರೆಗೆ ನೆಲೆನಿಂತು ಅನಂತರ ಪಶ್ಚಿಮವಾಹಿನಿಯಾಗಿ ಹರಿಯುವ ಹೇಮಾವತಿ ನದಿಯ ಸುತ್ತಮುತ್ತಲಿನ ಪ್ರದೇಶಗಳನ್ನು ಗಮನಿಸಿ ಶ್ರೀನಿವಾಸದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಶ್ರೀ ಕಲ್ಯಾಣ ಕಾರ್ಯಗಳನ್ನು ಮಾಡುತ್ತಾ ನೆಲೆಯಾಗುವಂತೆ ವೆಂಕಟರಮಣಸ್ವಾಮಿಯನ್ನು ಭೃಗುಮುನಿಗಳು ಪ್ರಾರ್ಥಿಸಿ-ಕೊಳ್ಳಲಾಗಿ ಅದರಂತೆಯೇ ಇಂದಿಗೂ ಕಲ್ಯಾಣ ಕಾರ್ಯಗಳು ಇಲ್ಲಿ ಜರುಗುತ್ತಿರುವ ವಿಷಯ ತಿಳಿದುಕೊಳ್ಳಲಾಯಿತು.

- ಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಹೇಮಗಿರಿ ಸುತ್ತಮುತ್ತಲಿನ ಜನಸಮುದಾಯದ ಕುರಿತು ಅಲ್ಲಿನ ಗ್ರಾಮಗಳ ಜನಸಂಖ್ಯೆ, ಜನಸಂಖ್ಯಾ ಅನುಪಾತ, ಸಾಮಾಜಿಕ ಪದ್ಧತಿಗಳಾದ ಜಾತಿಪದ್ಧತಿ, ಆಹಾರಪದ್ಧತಿ, ಅವರ ಉಡುಗೆ-ತೊಡುಗೆಗಳು, ಆಚರಿಸುವಂತಹ ಹಬ್ಬಗಳು, ವಿವಾಹ ಪದ್ಧತಿಗಳ ಬಗ್ಗೆ ತಿಳಿದುಕೊಳ್ಳಲಾಯಿತು. ಅಂತೆಯೇ ಧಾರ್ಮಿಕ ಆಚರಣೆಗಳ ಬಗ್ಗೆಯೂ ಸಹ ಅರಿತುಕೊಳ್ಳಲಾಯಿತು.
- ಹೇಮಗಿರಿ ಕ್ಷೇತ್ರವೂ ಶೈಕ್ಷಣಿಕ ಕೇಂದ್ರವಾಗಿದ್ದು ೧೯೬೩-೬೪ನೇ ಸಾಲಿನಲ್ಲಿ ಹೇಮಗಿರಿಯಲ್ಲಿ ಶ್ರೀಕಲ್ಯಾಣವೆಂಕಟರಮಣಸ್ವಾಮಿ ವಿದ್ಯಾಸಂಸ್ಥೆಯನ್ನು ಸ್ಥಾಪನೆ ಮಾಡಲಾಯಿತು. ಅಲ್ಲದೆ ವಸತಿಗೃಹದ ವ್ಯವಸ್ಥೆಯನ್ನು ಸಹ ಕಲ್ಪಿಸಿಕೊಡಲಾದ ವಿಷಯ ಕಲೆಹಾಕಲಾಯಿತು.
- ಹೇಮಗಿರಿ ದೇವಸ್ಥಾನ, ಸಮುದಾಯಭವನ, ಭೃಗುಮುನಿಗುಹೆ, ಭೃಗುಮುನಿ ಆಶ್ರಮ, ಕೋಡುಗಲ್ಲು, ಸಾಮಾಜಿಕ ಅರಣ್ಯ, ಅಲ್ಲಿನ ಸರ್ಕಾರಿ ಕಟ್ಟಡಗಳು ಇವೇ ಮೊದಲಾದವುಗಳು ತಿಳಿದುಬಂದವು.
- ಪಕ್ಷಿಧಾಮ, ಅಣೆಕಟ್ಟು, ಜಲವಿದ್ಯುತ್ ಉತ್ಪಾದನಾ ಕೇಂದ್ರ, ಏತನೀರಾವರಿ ವ್ಯವಸ್ಥೆ, ಜಲಶುದ್ಧೀಕರಣ ಘಟಕಗಳು, ಸಕ್ಕರೆ ಕಾರ್ಖಾನೆ ಇವೇ ಮೊದಲಾದ ಸ್ಥಳೀಯ ಮಾಹಿತಿಗಳು ತಿಳಿದುಬಂದವು.
- ಹೇಮಗಿರಿಯ ಅಭಿವೃದ್ಧಿಯಲ್ಲಿ ಪಾಲ್ಗೊಂಡ ಮಹಾನೀಯರಲ್ಲಿ ಪ್ರಮುಖರಾದ ಅರ್ಚಕ ಬಿ.ರಂಗಸ್ವಾಮಿಭಟ್ಟರ ಜೀವನ ಮತ್ತು ಸಾಧನೆಗಳ ಬಗ್ಗೆ ತಿಳಿದುಕೊಳ್ಳ ಲಾಯಿತು.
- "ಹುಟ್ಟಿದಹಳ್ಳಿ" ಜಾನಪದ ಕೃತಿಯಾಗಿದ್ದು ಅಂದಿನ ಮೈಸೂರು ಸಂಸ್ಥಾನಕ್ಕೆ ಮೊದಲ ಜಾನಪದ ಸಾಹಿತ್ಯದ ಕೃತಿಯೆನಿಸಿತು.
- ಹೇಮಗಿರಿಯ ಶ್ರೇಯೋಭಿವೃದ್ಧಿಯಲ್ಲಿ ಕುಪ್ಪಳ್ಳಿಯ ದೊಡ್ಡೇಗೌಡರು ವೆಂಕಟ ರಮಣಯ್ಯನವರು, ಬಂಡಿಹೊಳೆಯ ಬಸವೇಗೌಡರು, ಲಕ್ಷ್ಮೀಪುರ ಗ್ರಾಮದ ನಂಜೇಗೌಡರು (ಕೆ.ಆರ್.ಪೇಟೆ ತಾಲ್ಲೂಕಿನ ಮಾಜಿಶಾಸಕರು) ಇವರೇ ಮೊದಲಾದವರು ಹೇಮಗಿರಿಯು ಪ್ರಗತಿಪಥದತ್ತ ಸಾಗಲು ಕಾರಣಕರ್ತರಾದವ ರೆಂಬುದು ಮನಗಾಣಬಹುದಾದ ವಿಷಯ.

- ಹೇಮಗಿರಿಯ ಗುರುಕುಲವನ್ನು ನಿವೃತ್ತ ಶಿಕ್ಷಣ ಪದಾಧಿಕಾರಿಗಳಾದ ಜಿ.ಪಿ.ಶಿವರಾಂ ರವರು ಸ್ಥಾಪನೆ ಮಾಡಿದ್ದು ಅನಂತರ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದೊಂದಿಗೆ ವಿಲೀನವಾಗಿ ಶೈಕ್ಷಣಿಕ ಪ್ರಗತಿ ಸಾಧಿಸುತ್ತಿರುವುದನ್ನು ತಿಳಿದು-ಕೊಳ್ಳಲಾಯಿತು.

## ಪರಿಶಿಷ್ಟ

**ಶ್ರೀಕ್ಷೇತ್ರ ಕುರಿತು ಗೀತೆ – ಹಾಡು ಇತ್ಯಾದಿ ಭಕ್ತಿರಚನೆಗಳು**

**ಹೇಮಗಿರಿ ಗೀತೆ**

ಹೇಮಗಿರಿಯ ಪ್ರಶಾಂತ ಪ್ರಕೃತಿಯ
ಶ್ರೀ ಮನೋಹರ ಮೂರ್ತಿಯೇ।
ಕಾಮಧೇನುವೇ ಬಾಳ ಭಾನುವೇ

ಸ್ವಾಮಿ ನಿನ್ನಡಿಗೆರಗುವೆ, ಸ್ವಾಮಿ ನಿನ್ನಡಿಗೆರಗುವೆ॥೧॥
ಭೃಗುವಿಗೊಲಿದು ಮಹತ್ವ ಕಾಣಿಸಿ
ಸಗುಣ ರೂಪವ ತಾಳಿದೆ
ನಿಗದಿ ನಿರ್ಝರ ನೆಲೆಸಿ ಬದುಕಲು
ಸುಗುಣ ಹೆಚ್ಚಲಿ ಕರುಣತೆ ಹೇಮಗಿರಿಯ॥೨॥

ತಡೆಯ ನಡುಗಿಸಿ ನಡೆದು ಮುಂದಕೆ
ಪಡೆದು ಜೀವಾಮೃತವನು
ಕೊಡುವ ಹೇಮಾವತಿಯ ತ್ಯಾಗವು
ಹಿಡಿದು ನೆಡೆಯಿಸಲೆನ್ನನು– ಸ್ವಾಮಿ ನಿನ್ನಡೆ ಗೆರಗುವೆ॥೩॥

ನೀನೇ ಕೇಶವ ರಂಗನಾಥನು
ನೀನೆ ವೆಂಕಟರಮಣನು
ಶ್ರೀನಿವಾಸನು ಶಿವನು ಬ್ರಹ್ಮನು
ಜ್ಞಾನದೊಲುಮೆಯ ಜ್ಯೋತಿಯ। ಶ್ರೀ ಮನೋಹರಮೂರ್ತಿಯ॥೪॥

ನಿನ್ನ ಸನ್ನಿಧಿಯೆನಗೆ ನವನಿಧಿ
ನಿನ್ನ ಪೂಜೆಯೇ ಪಾವನ
ಎನ್ನ ಮನವತಿ ಶುದ್ಧವಾಗಲಿ
ಭಿನ್ನಭಾವನೆ ಹೋಗಲಿ–ನಿನ್ನ ಪ್ರಾರ್ಥನೆ ಪಾವನ॥೫॥

ನೀಡು ವಿದ್ಯೆಯ ಬುದ್ಧಿ ಶಕ್ತಿಯ
ಮೂಡಿ ಸನ್ನಲಿ ಭಕ್ತಿಯ।
ಕೂಡಿ ಬಾಳುವ ಪ್ರೀತಿ ನೀತಿಯ
ನಾಡ ಸೇವಾ ಸಕ್ತಿಯಾ॥೬॥

**ರಚನೆ: ಕೆ.ಕೆ.ಮೂರ್ತಿ, ಕುಪ್ಪಳಿ**

**ಹೇಮಗಿರಿ ಜೋಗಪ್ಪ**

ಎಲ್ಲಿ ಜೋಗಪ್ಪ ನಿನ್ ಅರಮನೆ। ಎಲ್ಲಿ ಜೋಗಪ್ಪ ನಿನ್ ತಳಮಾನಿ।
ಎಲ್ಲಿ ಜೋಗಪ್ಪ ನಿನ್ ಕಿರುಮಾನಿ॥
ಅತ್ತಿತ್ತ ಬೆಟ್ಟಸಾಲು। ಇತ್ತಿತ್ತ ನದಿ ಸಾಲು। ಹೇಮಗಿರಿ ಬುಡ್‌ದ್ಯಾಗೆ ನನ್ ಅರಮನಿ
ಶ್ರೀನಿವಾಸ ತಾಣ್ದ್ಯಾಗೆ ನನ್ನ ತಳಮಾನಿ। ಅಲ್ಲೇ ನನ್ನ ಕಿರುಮಾನಿ॥
ನಿನ್ ಬಾಳು ಹ್ಯಾಂಗಪ್ಪ। ನಿನ್ ಜೀವನ ಹ್ಯಾಂಗಪ್ಪ ।ಎಲ್ಲರ ಜೀವನ ಹ್ಯಾಂಗಪ್ಪ॥
ಬೆಳಿಗ್ಗೆ ಎದ್ದು ಹೇಮಾವತಿಯಲ್ ಮಿಂದು। ಶ್ರೀನಿವಾಸನ ದರ್ಶನ ಮಾಡಿ।
ದಿನಗಳ ಕಳೆತ್ತಿವ್ನಿ ಸ್ವಾಮಿ ।ಒಪ್ಪೊತ್ತ್ನ ಕೂಳ್ಗಾಗಿ ಊರೂರ ಅಲಿದು।
ದಣಿದು ಕುಳಿತಿವ್ನಿನಿ ಸ್ವಾಮಿ ।ಎಲ್ಲಿ ಜೋಗಪ್ಪ॥
ಬಾರೋ ಜೋಗಪ್ಪ ನನ್ ಪುಟ್ಟ ಮನೆಗೆ । ಒಪ್ಪೋತ್ನ ಕೂಳ ಕೊಡ್ತೀನೋ।
ಏಳೋ ಜೋಗಪ್ಪ ಇನ್ನು ಮನೆಗೆ ಹೋಗೋಣ॥
ಎಲ್ಲಿದ್ದೆ ಏನಪ್ಪ । ಎಂತಿದ್ರೆ ಏನಪ್ಪ । ನೋಡಲ್ಲಿ ಕಾಣ್ತಿದೆ ನನ್ನರಮಾನಿ। ಎಲ್ಲಿದ್ರೆ ಏನಪ್ಪ । ಹುಟ್ಟಿದವನು ಸಾಯಲೇಬೇಕು । ಎಲ್ಲರನ್ನು ಕಾಯ್ತಿರೋ ನಮ್ಮ ಶ್ರೀನಿವಾಸನು । ಎಲ್ಲಿ ಜೋಗಪ್ಪ॥
ಶ್ರೀನಿವಾಸನ ಹೆಸರು ಹೇಳಿ ನನ್ನ ಬಾಳಿನ ಪುಟವನ್ನು ಮುಗಿಸ್ತೀನೋ॥
ನನ್ನ ಬಾಳಿನ ಪುಟವನ್ನು ಮುಗಿಸ್ತೀನೋ॥

**ರಚನೆ: ಟಿ.ಗೋವಿಂದಯ್ಯ, ನಿವೃತ್ತ ಶಿಕ್ಷಕರು, ಹೇಮಗಿರಿ**

## ಹೇಮಗಿರಿಯ ಗುರುಕುಲ

ನೋಡಲ್ಲಿ ಕಾಣುತ್ತಿದೆ ಶ್ರೀರಂಗನ ಮೂರ್ತಿ
ನಾಡೆಲ್ಲ ಹರಡಿಹುದು ಹೇಮಗಿರಿಯ ಕೀರ್ತಿ
ಬಹುಮಹತ್ವ ಪಡೆದಿಹುದೀ ಪರಿಸರವೇ ಪೂರ್ತಿ
ಪ್ರೌಢವಿದ್ಯಾಭ್ಯಾಸಕ್ಕೆ ಸನ್ನಿದಿಯೇ ಸ್ಫೂರ್ತಿ

ಮಾತೆ ಹೇಮವತಿಯು ಹರಿಯುತಿಹಳು ಇಲ್ಲಿ
ಜಗದೊಡೆಯನ ಪಾದಗಳು ಪನ್ನೀರನು ಚೆಲ್ಲಿ
ಜೇನಿನ ಮಳೆಗರೆದಿಹಳು ಬಯಲಿನ ಹಸಿರಲ್ಲಿ
ಸಕಲ ಪಾಪ ನೀಗುವಳು ಕುಡಿವ ತೀರ್ಥದಲ್ಲಿ

ದೀನದಲಿತ ದುರ್ಬಲರ ವಿದ್ಯಾರ್ಥಿಯ ನಿಲಯ
ಸ್ವಾಮಿಯ ಪ್ರಸಾದ ಅನ್ನದಾನ ಅಕ್ಷಯ
ಅಖಿಲ ಸೇವೆಗಳು ಕದಿರು ಆಶ್ರಯದೊಳು ಗೆಳೆಯ
ಪೂರ್ವಜನ್ಮ ಪುಣ್ಯಫಲವು ಇನ್ನಿಲ್ಲವು ಸಂಶಯ

ಭೃಗುಮುನಿಗಳ ತಪೋಭೂಮಿಯಾಗಿಹುದೀತಾಣವು
ರಾಮಸತಿಯನರಸಿ ಬಂದ ಹನುಮನಿರುವ ಕ್ಷೇತ್ರವು
ಪ್ರತಿವರ್ಷದ ಮಾಘ ಶುದ್ಧ ರಥಸಪ್ತಮಿ ದಿವಸವು
ಬಹುರಮ್ಯವು ರಂಗನಾಥ ಜಾತ್ರಾ ರಥೋತ್ಸವವು

ಗಿರಿಮರಗಳ ನೆರಳಿನಲ್ಲಿ ಇರುವುದೊಂದು ಗುರಕುಲ
ಇದರ ಹಿರಿಮೆ ವರ್ಣಿಸಲು ಶೇಷನಿಗೂ ಅಸದಳ
ಶಾರದಾಂಬೆಯಾಲಯವೇ ಗುರುಹೃದಯದ ಕಮಲ
ಕಲಿಭಾಗಯ ದೊರೆಯುವವರ ಬಾಳಜ್ಯೋತಿ–ಉಜ್ವಲ

ಹೇಮಗಿರಿಯ ಆದಿದೇವತೆ ಪಡೆದಿಹ ಈ ಕೂಸನು
ಚುಂಚನಗಿರಿ ಭೈರವನೇ ಸಲಹಲೆಂದು ಪಡೆದನು
ಹೇಮಗಿರಿಯ ಆದೀಶ್ವರನು ಜಪಿಸಿ ಪಡೆದ ಸುಮವನು
ಕೈಲಾಸ ಗಿರಿಯೊಡೆಯ ಜಗವಬೆಳಗೆ ಮುಡಿದನು.

**ಹೇಮಗಿರಿಯ ಸೊಬಗು**

ಅಗೋ ನೋಡು ಹೇಮಗಿರಿ
ಸುತ್ತಮುತ್ತ ನಾಗಸಿರಿ
ಅಕ್ಕ-ಪಕ್ಕ ವನಸಿರಿ
ಸುತ್ತಲೂ ಹೊಳೆಸಿರಿ
ಶ್ರೀರಂಗನಾಥನ ಗುಡಿಸಿರಿ
ಹಿಮದಂತಿರುವ ಹೇಮಗಿರಿ

**ಸ್ವರ್ಗವಂತೆ ಹೇಮಗಿರಿಯ ಸಹವಾಸ**

ಹೇಮಗಿರಿಯ ರಂಗನಾಥ
ನೀನೊಬ್ಬ ಶಾಂತಿದೂತ
ನೀನೆ ನನ್ನ ಪ್ರೇಮದಾತ
ಮಾಡುವೆ ನಿನ್ನ ಸಹವಾಸ
ನೀಡುವೆಯ ಉಲ್ಲಾಸ

ಬಂದೆ ನಾನು ತವಕದಿಂದ
ನೊಡಲು ನಿನ್ನಂದ ಚಂದ
ದಯೆ ತೋರು ಪ್ರೀತಿಯಿಂದ
ಮುನ್ನುಗ್ಗುವೆ ಧೈರ್ಯದಿಂದ
ನನಗದೇ ಮಹಾದಾನಂದ

ನಾನೇರಿ ಬರುವ ನಿನ್ನಗಿರಿ
ಕರುನಾಡಿನ ವನಸಿರಿ
ಸುತ್ತಮುತ್ತ ಬೆಟ್ಟಗಿರಿ
ಮತ್ತೆ ಮತ್ತೆ ನೋಡುವ ಪರಿ
ನೋಡಿದವಂಗದೇ ಸಿರಿ

ಪಕ್ಕದಲ್ಲೇ ಒಂದು ನದಿಯು
ಅದರ ಹೆಸರೆ ಹೇಮಾವತಿಯು
ಸಿಹಿಯಂತೆ ಅದರ ಜಲವು
ಮುಗ್ಧ ಜನಕೆ ಅದುವೆ ಉಸಿರು
ಸುತ್ತಮುತ್ತ ಹಚ್ಚ ಹಸಿರು

ಸರ್ವರಿಗೂ ತಂದೆಯಂತೆ
ಬಡವರಿಗೆ ಬಂಧುವಂತೆ
ನಿನ್ನ ನೆಲೆ ಹೇಮಗಿರಿಯಂತೆ
ನನಗದು ಸ್ವರ್ಗದಂತೆ
ಬರುವೆ ನಾ ಎಂದಿನಂತೆ

**ರಚನೆ: ಅಫ್‌ಸರ್ ಪಾಷ, ಅರೇನಹಳ್ಳಿ**

## ಹೇಮಗಿರಿಯ ವೈಭವದ ವರ್ಣನೆ

ಕನ್ನಡ ನಾಡು ನೋಡಾ
ಕನ್ನಡ ಬೀಡುನೋಡಾ
ಕನ್ನಡ ನಾಡಿನ ವೈಭವವ ನೋಡಾ॥ಪ॥

ಕನ್ನಡನಾಡೊಳಾ ಹೇಮಗಿರಿಯೆಂಬ ಸ್ಥಳವಾ ನೋಡಾ
ಅಲ್ಲಿಯ ಹೇಮಾವತಿಯೆಂಬ ನದಿಯಾ ನೋಡಾ
ಬೆಳ್ಳಿಬೆಟ್ಟದ ಮ್ಯಾಲಾ ನಿಂತು ಟಿಪ್ಪು ಕಟ್ಟಿದ ಹೊಸಪಟ್ಣವ ನೋಡಾ॥

ಹೇಮಗಿರಿಯ ಬೆಟ್ಟದ ನೋಡಾ
ಅಲ್ಲಿನ ರಂಗನಾಥಸ್ವಾಮಿಯೂ ನೋಡಾ
ಕೋಡಗಲ್ಲಿನ ಮ್ಯಾಲಾ ನಿಂತು ಹಸಿರುಗದ್ದೆಗಳ ನೋಡಾ॥

ಹೇಮಗಿರಿಯ ಶ್ರೀಕಲ್ಯಾಣವೆಂಕಟರಮಣಸ್ವಾಮಿ ಶಾಲೆಯ ನೋಡಾ
ಶಾಲೆಯಲ್ಲಿನ ಪ್ರಗತಿ ಕಲಿಕೆಯ ನೋಡಾ
ಭೃಗುಮುನಿ ಆಶ್ರಮದ ಶಾಂತಿ–ಮಂತ್ರವೆಂಬ ಜಪವಾ ಕೇಳಾ॥

ಹೇಮಗಿರಿಯ ದನಗಳ ಜಾತ್ರೆಯ ನೋಡಾ
ರಂಗನ ತೇರಿನ ಆಕರ್ಷಣೆಯ ನೋಡಾ
ರಂಗನ ತೆಪ್ಪೋತ್ಸವದ ಬೆಳಕು ನೋಡಾ॥

**ರಚನೆ: ಅಫ್‌ಸರ್ ಪಾಷ, ಅರೇನಹಳ್ಳಿ**

## ಹೇಮಗಿರಿಯ ಅಮರಕೀರ್ತಿ

ವಿದ್ಯೆ ಬೇಡಲು ಬಂದವರ ಕಾಮಧೇನುವೇ
ಸಹನೆ, ದಯೆ, ಶಿಸ್ತು, ಮೂಡಿಸುವೆ
ಕತ್ತಲಲಿ ಕಟ್ಟಿದ ಮನುವನು ಬೆಳಕಿನಲ್ಲಿ
ಭಿತ್ತಿ ಬೆಳೆಸುವ ಹೇಮಗಿರಿಯ ಗುರುಕುಲವೇ

ಭೃಗು ಮುನಿಗಳ ಮನೆತನದ ಪುಣ್ಯಭೂಮಿಯೇ
ಶ್ರೀನಿವಾಸ ಮೂರ್ತಿಯ ನೆಲೆಯು ಬೀಡೆ
ಸಾಲಿದ ಮಣಿಯ ಬೆಳ್ಳಿಬೆಟ್ಟದ ಸಾಲೆ
ಪುಣ್ಯಕ್ಷೇತ್ರವಾಗಿರುವ ಹೇಮಗಿರಿಯೇ

ಮೌನವಾಗಿ ಹರಿಯುತಿಹಳು ಹೇಮಾವತಿಯ
ಕೊಳೆಯೆಂಬ ಪಾಪವನು ತೊಳೆಯುತಿಹಳು
ಮಂದಿಗಳ ಮನಕೆ ಸಂತಸವೀಯುತಿಹಳು
ನೆಲವೊಲಗಳು ಹಸಿರು ಮಾಡುತಿಹಳು

ಪರಿಸರವ ಪಡೆದಿಹುದು ಬಹುಕೀರ್ತಿಯ
ಪ್ರಕೃತಿ ಮಾತೆಯ ಸೊಬಗೆಯಾಗಿರುವ
ಹಸಿರು ಮರಗಳ ಗಿಡಗಳ ರಮಣೀಯ ಸೌಂದರ್ಯ
ಇದರಿಂದ ಪಡೆವುದು ಅಮರಕೀರ್ತಿಯ

ಯಾವ ಪೂರ್ವ ಜನ್ಮದ ಪುಣ್ಯವೋ
ವಿದ್ಯೆ ಕಲಿಯಲು ಬಂದವರ ಹೃದಯ ಕಮಲವೋ
ಅಜ್ಞಾನವನ್ನು ಸುಟ್ಟು ಜ್ಞಾನವ ಮೂಡಿಸುವ
ಶಾರದಾಂಬೆಯ ಮಹಿಮೆಯೋ

## ಬನ್ನಿರಿ ಬನ್ನಿರಿ ನೋಡಬನ್ನಿರಿ

ಬನ್ನಿರಿ ಬನ್ನಿರಿ ನೋಡ ಬನ್ನಿರಿ
ನಮ್ಮೀ ಹೇಮಗಿರಿಯ ಸೊಬಗನು
ನೋಡಬನ್ನಿರಿ ಈ ನಮ್ಮ ರಂಗನಾಥನ ದೇವಾಲಯವನ್ನು
ಬನ್ನಿರಿ ಬನ್ನಿರಿ ನಮ್ಮೀ ಹೇಮಗಿರಿಗೆ ಮರೆಯದೇ ಬನ್ನಿರಿ

ಹೇಮಾದ್ರಿಯ ರಂಗನ ದರ್ಶನ ಮಾಡಲು ಬನ್ನಿರಿ
ರಂಗನಾಥನ ರಥವನ್ನೆಳೆಯಲು ಬನ್ನಿರಿ
ತೆಪ್ಪೋತ್ಸವದ ನೋಡಲು ತಪ್ಪದೆ ಬನ್ನಿರಿ

ಹೇಮಾವತಿ ಹೊಳೆಯನು ನೋಡಲು ಬನ್ನಿರಿ
ಹೊಳೆಯಲಿ ತಾವರೆ ಸೊಗಸಿದೆ ಬನ್ನಿರಿ
ಇಲ್ಲಿಗೆ ಬರುವ ದನಗಳ ಜಾತ್ರೆ ನೋಡಲು ಬನ್ನಿರಿ
ಇಲ್ಲಿಗೆ ಬರುವ ಭಕ್ತಾದಿಗಳ ನೋಡಲು ಬನ್ನಿರಿ

ಹಾಡುತ ಹರುಷದಿ ಬನ್ನಿರಿ
ಹೇಮಗಿರಿಯ ಸೊಬಗನು ನೋಡಲು ಬನ್ನಿರಿ

**ಶ್ರೀರಂಗನಾಥನ ಮಹಿಮೆ**

ಬೆಟ್ಟದಲ್ಲಿ ಶ್ರೀರಂಗನಾಥನ ಮೂರ್ತಿ
ಅವನಿಗೆ ಸಲ್ಲಲಿ ನಮ್ಮೆಲ್ಲರ ಆರತಿ
ಭೃಗು ಮಹರ್ಷಿಗಳ ತಪೋಭೂಮಿ
ನಿಜ, ಸತಿ, ಸತ್ಯವಂತರಾಳಿದ ಭೂಮಿ

ಸುತ್ತಲೆಲ್ಲರ ಸದ್ದುಗದ್ದಲ
ರಂಗನಾಥನಿಗೆ ಗಂಟೆಯ ಗದ್ದಲ
ಪಕ್ಕದಲ್ಲೇ ಪ್ರಶಾಂತವಾದ ಹೇಮಾವತಿ ನದಿ
ಆ ನದಿಯ ಶರವೇಗವ ಕಂಡು ಜನತೆಯ ಮನನಿಧಿ

ಅಲ್ಲಿ ನೆರೆಯಲಿ ಬಹುಮಂದಿ ಜನತೆ
ಆ ಜನರೆಗೆ ಸಿಗಲಿ ರಂಗನಾಥನ ಮಹಿಮೆ
ಜನವರಿ ತಿಂಗಳ ಜಾತ್ರೆಯ ದಿವಸ
ರಂಗನಾಥನಿಗೆ ಹಾಲುಂಡ ದಿವಸ

ಭಕ್ತಾದಿಗಳು ಬರುವರಿಲ್ಲಿಗೆ
ಪೂಜೆ ಮಾಡುವರು ರಂಗನಾಥಸ್ವಾಮಿಗೆ
ಅವರು ನಮಗೆ ನೀಡುವರು ಸ್ಫೂರ್ತಿ
ಅದು ನಮಗೆ ತರುವುದು ಕೀರ್ತಿ

## ಹೇಮಗಿರಿ

ನೋಡಲ್ಲಿ ನಲಿಯುತಿದೆ ಪ್ರಕೃತಿಯ ಸಿರಿ
ಈ ಸುಂದರ ತಾಣವೆ ಹೇಮಗಿರಿ
ಭೃಗುಮುನಿ ತಪಗೈದ ತಾಣ
ಪ್ರೇಕ್ಷಕರಿಗೆ ಈ ತಾಣ ಪಂಚಪ್ರಾಣ

ಹೇಮಾವತಿ ಹರಿಯುತಿಹಳು ಬಳುಕುತ
ಭಕ್ತರ ಪಾಪವ ಕಳೆಯುತ
ಗಿರಿಯಲ್ಲಿ ನೆಲೆಸಿದ್ದಾನೆ ರಂಗನಾಥ
ಕೈಮುಗಿದವರ ಕಾಪಾಡುವ ಧರ್ಮದಾತ

ವರ್ಷಕ್ಕೊಮ್ಮೆ ನಡೆಯುವುದು ಜಾತ್ರೆ
ದೂರದಿಂದ ಭಕ್ತರ ಪಾದಯಾತ್ರೆ
ಹೇಮಾವತಿಯ ಪುಣ್ಯಸ್ನಾನ
ಮಾಡುವರು ರಂಗನಾಥನ ಧ್ಯಾನ

ಜನ ಪಡೆಯುವರು ಅಮೋಘ ಪುಣ್ಯ
ಇಲ್ಲಿರುವ ಜನರೆ ಧನ್ಯ
ಮನಸ್ಸಿಗೆ ಮುದ ನೀಡುವ ಪ್ರಕೃತಿ
ಹೇಮಗಿರಿಯ ಚರಿತ್ರೆ ಅಮರ ಕೃತಿ

**ಹೇಮಗಿರಿಯ ಸೊಬಗು**

ಇದೇ ನೋಡು ಹೇಮಗಿರಿ
ಪ್ರಕೃತಿಯ ನಿಜವಾದ ಸಿರಿ
ಇದೇ ವೆಂಕಟರಮಣನ ಗಿರಿ
ಇವನ ಬೇಡುವರು ಪರಿಪರಿ

ಅಗೋ ನೋಡು ರಂಗನಾಥನ
ಸುಂದರವಾದ ಕಮಲನಯನ
ಭಕ್ತರು ಸಲ್ಲಿಸುವರು ಇವನಿಗೆ ನಮನ
ಆಗುವುದು ಅವರ ಕಷ್ಟಗಳ ಶಮನ

ಇಗೋ ಇಲ್ಲಿದೆ ಭೃಗುಮುನಿಧಾಮ
ಇಲ್ಲಿ ನೆಲೆಸಿರುವನಾ ಪರಮಾತ್ಮ
ಪಕ್ಕದಲ್ಲೇ ಹರಿಯುತ್ತಾಳೆ ಹೇಮ
ಅವಳು ಹರಿಯುವ ದಿಕ್ಕು ಪಶ್ಚಿಮ

ವರ್ಷಕ್ಕೊಮ್ಮೆ ನಡೆಯುವುದು ಜಾತ್ರೆ
ಆಗುವುದು ಇಲ್ಲಿಗೆ ಜನರ ಪಾದಯಾತ್ರೆ
ಭಕ್ತರಿಂದಲೇ ಆಗುತ್ತೆ ರಥಯಾತ್ರೆ
ಪುಣ್ಯಸ್ನಾನದಿಂದ ಪಡೆಯುವರು ಪಾವಿತ್ರ್ಯತೆ

## ಹೇಮಗಿರಿ ಗುರುಕುಲ

ಹೇಮಗಿರಿಯ ಗುರುಕುಲ ಮಠವಿದು
ವರುಷ ವರುಷದಿ ಸಾಧನೆಯ ಕೀರ್ತಿ ತರುತಿಹುದು
ಸಾವಿರಾರು ವಿದ್ಯಾರ್ಥಿಗಳ ಜ್ಞಾನ ದೇಗುಲವಿದು
ಅಡಗಿಹ ಜ್ಞಾನ ಭಂಡಾರವಿದು

ನದಿಬಯಲುಗಳ ಪ್ರಶಾಂತ ಪ್ರಕೃತಿಯಲಿ
ನೆಲೆಸಿರುವ ಈ ಸೊಬಗಿನ ಸುವರ್ಣ ಗಿರಿಯಲಿ
ಬನ್ನಿರೆ ಮಕ್ಕಳೆ ರಂಗನಾಥನ ಸನಿಹದಲಿ
ಆನಂದದಿ ತೊಡಗಿರಿ ವಿದ್ಯಾ ಪ್ರಗತಿಯಲಿ

ಚೆಲುವಾದ ಹೇಮಗಿರಿ ರಂಜಿಸುವ ರಂಗೋಲೆ
ತಳಿರು ತೋರಣಗಳಿಂ ಶೋಭಿಸೆ
ಸುಗಂಧ ಪರಿಮಳ ಪುಷ್ಪಗಳ ಪರಿಪಕ್ವಪಣ್ಣುಗಳ
ಅರ್ಪಿಸಲು ಆದರದಿ ಬಂದಿಹರು ಭಕ್ತರು ಗುರುಕುಲಕೆ

ಬಹುಜನರು ಬಂದು ಹೇಮಾವತಿಯೊಳು ಮೀಯಲು
ಭಕ್ತಜನ ಬಹುವಿಧದಿ ಶ್ರೀರಂಗನ ಪೂಜಿಸಲು
ಪಾಪಿಗಳ ಪಾಪವಂ ಕಳೆಯಲ್
ಬಹುಜನ ಭಕ್ತರ ಜೀವನ ಪಾವನವಾಯಿತು ಅಂತ್ಯದೊಳ್

# ಕ್ಷೇತ್ರ ಕಾರ್ಯ ನಡೆಸಿದ ಮಾಹಿತಿ ತಃಖ್ತೆ

| ಕ್ರಸಂ. | ವಕ್ತೃವಿನ ಹೆಸರು | ಪುರುಷ/ಮಹಿಳೆ | ವಯಸ್ಸು | ವೃತ್ತಿ | ವಿದ್ಯಾಭ್ಯಾಸದ ಮಟ್ಟ | ಸ್ಥಳೀಯರೇ/ಹೊರಗಿನವರೇ | ಷರಾ |
|---|---|---|---|---|---|---|---|
| ೧ | ಟಿ.ರಾಮೇಗೌಡ | ಪುರುಷ | ೫೧ | ಶಿಕ್ಷಕರು | ಬಿ.ಎ. ಬಿ.ಎಡ್., | ಹೊರಗಿನವರು ಕಟ್ಟೆಕ್ಯಾತನಹಳ್ಳಿ | |
| ೨ | ಎನ್.ನಂಜೇಗೌಡ | ಪುರುಷ | ೮೨ | -- | ೪ನೇ ತರಗತಿ | ಸ್ಥಳೀಯರು, ಬಂಡಿಹೊಳೆ | |
| ೩ | ಚಂದ್ರಶೇಖರ್.ಕೆ.ಸಿ. | ಪುರುಷ | ೩೬ | ಬೇಸಾಯ | ಪಿಯುಸಿ, ಟಿಸಿಎಚ್ | ಸ್ಥಳೀಯರು, ಕುಪ್ಪಳ್ಳಿ | |
| ೪ | ಕೆ.ಎಸ್.ಸೀತಾರಾಮಯ್ಯ | ಪುರುಷ | ೭೧ | ಅರ್ಚಕರು | ಮೆಟ್ರಿಕ್ಯುಲೇಷನ್ | ಸ್ಥಳೀಯರು, ಕುಪ್ಪಳ್ಳಿ | |
| ೫ | ರಾಮಕೃಷ್ಣ | ಪುರುಷ | ೬೯ | ಅರ್ಚಕರು | ೮ನೇ ತರಗತಿ | ಹೊರಗಿನವರು, ತೇಗನಹಳ್ಳಿ | |
| ೬ | ಶೀಲಾ ಬಿ.ಎನ್. | ಮಹಿಳೆ | ೩೦ | ಗೃಹಿಣಿ | ಬಿ.ಎ., ಬಿ.ಎಡ್., | ಸ್ಥಳೀಯರು, ಬಂಡಿಹೊಳೆ | |
| ೭ | ಹರೀಶ.ಬಿ.ಎನ್. | ಪುರುಷ | ೩೩ | ಬೇಸಾಯ | ಪಿಯುಸಿ | ಸ್ಥಳೀಯರು, ಬಂಡಿಹೊಳೆ | |
| ೮ | ಶಿವಣ್ಣ | ಪುರುಷ | ೨೮ | ಕೂಲಿ | ಅನಕ್ಷರಸ್ಥರು | ಸ್ಥಳೀಯರು, ಬಿ.ಬಿ.ಕಾವಲ್ | |
| ೯ | ಜಯಲಕ್ಷ್ಮಿ | ಮಹಿಳೆ | ೩೦ | ಗೃಹಿಣಿ | ಅನಕ್ಷರಸ್ಥರು | ಸ್ಥಳೀಯರು, ಬಿ.ಬಿ.ಕಾವಲ್ | |
| ೧೦ | ಕಾಳಯ್ಯ | ಪುರುಷ | ೬೦ | ಕೂಲಿ | ಅನಕ್ಷರಸ್ಥರು | ಸ್ಥಳೀಯರು, ಬಿ.ಬಿ.ಕಾವಲ್ | |
| ೧೧ | ಸರೋಜ | ಮಹಿಳೆ | ೨೫ | ಗೃಹಿಣಿ | ಎಸ್.ಎಸ್.ಎಲ್.ಸಿ | ಸ್ಥಳೀಯರು, ಬಿ.ಬಿ.ಕಾವಲ್ | |
| ೧೨ | ರೇವರಾಜು | ಪುರುಷ | ೨೪ | ಬೇಸಾಯ | ಅನಕ್ಷರಸ್ಥರು | ಸ್ಥಳೀಯರು, ಬಿ.ಬಿ.ಕಾವಲ್ | |
| ೧೩ | ಟಿ.ಗೋವಿಂದಯ್ಯ | ಪುರುಷ | ೬೫ | ನಿವೃತ್ತ ಶಿಕ್ಷಕರು | ಬಿ.ಎ., ಬಿ.ಎಡ್., | ಹೊರಗಿನವರು ಕೆ.ಆರ್.ಪೇಟೆ | |

| | | | | | | | |
|---|---|---|---|---|---|---|---|
| ೧೪ | ರಮಣೀಭಟ್ಟರು | ಪುರುಷ | ೪೫ | ಅರ್ಚಕರು | ಎಸ್.ಎಸ್.ಎಲ್.ಸಿ | ಸ್ಥಳೀಯರು, ಬಂಡಿಹೊಳೆ | |
| ೧೫ | ಬನ್ನೇಗೌಡ | ಪುರುಷ | ೬೦ | ಪಿಎಲ್‌ಡಿ ಬ್ಯಾಂಕ್ ಸದಸ್ಯರು | ಎಸ್.ಎಸ್.ಎಲ್.ಸಿ | ಸ್ಥಳೀಯರು, ನಾಟನಹಳ್ಳಿ | |
| ೧೬ | ಜಯಮ್ಮ | ಮಹಿಳೆ | ೬೮ | ಗೃಹಿಣಿ | ೭ನೇ ತರಗತಿ | ಸ್ಥಳೀಯರು, ನಾಟನಹಳ್ಳಿ | |
| ೧೭ | ಗಂಗಾಧರ | ಪುರುಷ | ೫೮ | ರಾಜಕಾರಣಿ | ಎಸ್.ಎಸ್.ಎಲ್.ಸಿ | ಸ್ಥಳೀಯರು, ನಾಟನಹಳ್ಳಿ | |
| ೧೮ | ಎನ್.ಎಸ್.ಸುರೇಶ್ | ಪುರುಷ | ೪೨ | ವ್ಯಾಪಾರಿ | ಪಿ.ಯು.ಸಿ C.PED | ಸ್ಥಳೀಯರು, ನಾಟನಹಳ್ಳಿ | |
| ೧೯ | ಶಂಕರೇಗೌಡ | ಪುರುಷ | ೫೫ | ಬೇಸಾಯ | ಎಸ್.ಎಸ್.ಎಲ್.ಸಿ | ಸ್ಥಳೀಯರು, ಲಕ್ಷ್ಮೀಪುರ | |
| ೨೦ | ಬಂಗಾರಯ್ಯ | ಪುರುಷ | ೫೫ | ಗುಮಾಸ್ತರು | ಪಿ.ಯು.ಸಿ | ಸ್ಥಳೀಯರು, ಲಕ್ಷ್ಮೀಪುರ | |
| ೨೧ | ಲೋಕೇಶ್ | ಪುರುಷ | ೪೫ | ಬೇಸಾಯ | ಎಸ್.ಎಸ್.ಎಲ್.ಸಿ | ಸ್ಥಳೀಯರು, ಲಕ್ಷ್ಮೀಪುರ | |
| ೨೨ | ಹೇಮಚಂದ್ರ | ಪುರುಷ | -- | -- | | | |
| ೨೩ | ಶಾಂತಮ್ಮ | ಮಹಿಳೆ | ೬೦ | ಗೃಹಿಣಿ | ಅನಕ್ಷರಸ್ಥರು | ಸ್ಥಳೀಯರು ಬಂಡಿಹೊಳೆ | |
| ೨೪ | ಶಾರದಮ್ಮ | ಮಹಿಳೆ | ೪೫ | ಗೃಹಿಣಿ | ೭ನೇ ತರಗತಿ | ಸ್ಥಳೀಯರು ಬಂಡಿಹೊಳೆ | |

# ಅನುಬಂಧಗಳು

## ಪರಾಮರ್ಶನ ಗ್ರಂಥಗಳು

೧) ಹುಟ್ಟಿದಹಳ್ಳಿ , ಅರ್ಚಕ ಬಿ.ರಂಗಸ್ವಾಮಿ ಭಟ್ಟರು

೨) ಶ್ರೀಹೇಮಗಿರಿ ಮಹಾತ್ಮೆ, ಅರ್ಚಕ ಬಿ.ರಂಗಸ್ವಾಮಿಭಟ್ಟರು

೩) ಎಫಿಗ್ರಾಫಿಯ ಕರ್ನಾಟಕ (ಸಂಪುಟ–ಆರು) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪) ಹೇಮಗಿರಿ ಶ್ರೀರಂಗನಾಥಸ್ವಾಮಿ, ಕ್ಷೇತ್ರದರ್ಶನ (ಧ್ವನಿಸುರಳು), ಅಜ್ಜಯ್ಯ ಆಡಿಯೋ, ನಂ.೧೧೯, ಮುನಿಸಂಜೀವಪ್ಪ ಲೇಔಟ್, ಜರಗನಹಳ್ಳಿ, ಬೆಂಗಳೂರು – ೭೮.

## ಛಾಯಾಚಿತ್ರ ಸಂಪುಟ



೧. ಹೇಮಗಿರಿ ಬೆಟ್ಟದ ದೇವಸ್ಥಾನದಲ್ಲಿನ ಶ್ರೀ ಕಲ್ಯಾಣವೆಂಕಟರಮಣಸ್ವಾಮಿ ಮತ್ತು ಪದ್ಮಾವತಿಯರ ವಿಗ್ರಹಗಳು.



೨. ಹೇಮಗಿರಿ ಬೆಟ್ಟದ ಮೇಲಿರುವ ಮೆಟ್ಟಿಲುಗಳ ದೃಶ್ಯ



೩. ಹೇಮಗಿರಿಬೆಟ್ಟಕ್ಕೆ ಜಾತ್ರೆಯಂದು ಭಕ್ತಾದಿಗಳು ಭೇಟಿನೀಡುತ್ತಿರುವ ದೃಶ್ಯ



೪. ಹೇಮಗಿರಿ ಬೆಟ್ಟದಲ್ಲಿರುವ ಭೃಗುಮುನಿ ಗುಹೆ



೫. ಹೇಮಗಿರಿಯ ಪಕ್ಷಿಧಾಮದ ದೃಶ್ಯ



೬. ಹೇಮಗಿರಿ ಬೆಟ್ಟದಲ್ಲಿರುವ
ಕೋಡುಗಲ್ಲಿನ ದೃಶ್ಯ



೭. ೧೮೮೦ರಲ್ಲಿ ಮುಮ್ಮಡಿಕೃಷ್ಣರಾಜ ಒಡೆಯರ್‌ರವರಿಂದ ನಿರ್ಮಾಣವಾದ ಹೇಮಗಿರಿ ಅಣೆಕಟ್ಟು



೮. ಚಂದಗಾನಹಳ್ಳಿ ಅಮ್ಮನವರ ವಿಗ್ರಹರ ದೃಶ್ಯ



೯. ಚಂದಗಾನಹಳ್ಳಿ ಅಮ್ಮನ ದೇವಸ್ಥಾನದ ಬಳಿ ಕೋಳಿಯನ್ನು ಬಲಿನೀಡುತ್ತಿರುವ ದೃಶ್ಯ



೧೦. ಹೇಮಗಿರಿಯಲ್ಲಿ ಜಾತ್ರೆಯ ದಿವಸ ತೇರು ಸಾಗುತ್ತಿರುವ ದೃಶ್ಯ



೧೧. ಹೇಮಗಿರಿಯ ದನಗಳ ಜಾತ್ರೆಯ ದೃಶ್ಯ



೧೨. ಹೇಮಗಿರಿಯ ತೆಪ್ಪೋತ್ಸವದ ದೃಶ್ಯ



೧೩. ಬಂಡಿಹೊಳೆ ಗ್ರಾಮದ ಸಮೀಕ್ಷೆ ಬಗ್ಗೆ ಸಂದರ್ಶಕರು ಸ್ಥಳೀಯರಿಂದ ಮಾಹಿತಿ ಸಂಗ್ರಹ ಮಾಡುತ್ತಿರುವ ದೃಶ್ಯ



೧೪. ಕ್ಷೇತ್ರಕಾರ್ಯದ ಮೂಲಕ ಸಂದರ್ಶಕರು ಮಾಹಿತಿ ಸಂಗ್ರಹಣೆ ಮಾಡುತ್ತಿರುವ ದೃಶ್ಯ



೧೫. ಸಂದರ್ಶಕರು ಸ್ಥಳದಲ್ಲೇ ಹೊಸಪಟ್ಟಣದ ಬಗ್ಗೆ ಮಾಹಿತಿ ಸಂಗ್ರಹಣೆ ಮಾಡುತ್ತಿರುವ ದೃಶ್ಯ



೧೬. ಹೊಸಪಟ್ಟಣದಿಂದ ಬೆಳ್ಳಿಪಟ್ಟದ ದೃಶ್ಯ



೧೭. ಅರ್ಚಕ
ಬಿ.ರಂಗಸ್ವಾಮಿಭಟ್ಟರು



೧೮. ಕೆ.ಪಿ.ದೊಡ್ಡೇಗೌಡರು
ಕುಪ್ಪಹಳ್ಳಿ

